# "ಕೃಷ್ಣಮೂರ್ತಿ ಹನೂರು ಅವರ ಕಥಾ ಸಾಹಿತ್ಯ"

ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯಕ್ಕೆ ಎಂ.ಫಿಲ್. (ಕನ್ನಡ) ಪದವಿಗಾಗಿ ಅರ್ಪಿಸಲಾಗಿದೆ

ಸಂಶೋಧಕ

**ಹೆಚ್.ಜಿ. ಚಂದ್ರಶೇಖರ**

ನೋಂದಣಿ ಸಂಖ್ಯೆ : KRSMKS : ೦೦೪೩

ಮಾರ್ಗದರ್ಶಕರು

**ಡಾ. ಎ.ಆರ್. ಮದನ್‌ಕುಮಾರ್**, ಎಂ.ಎ., ಪಿಹೆಚ್.ಡಿ.

ಪ್ರಾಧ್ಯಾಪಕರು, ಕನ್ನಡ ವಿಭಾಗ

ಮಹಿಳಾ ಸರ್ಕಾರಿ ಪದವಿ ಕಾಲೇಜು, ಮಂಡ್ಯ





**ಕರ್ನಾಟಕ ಸಂಘ (ರಿ), ಮಂಡ್ಯ**

ಪಿ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿಯಿಂದ ಮಾನ್ಯತೆ ಪಡೆದಿದೆ)

ಮಂಡ್ಯ

೨೦೦೯-೧೦

# "ಕೃಷ್ಣಮೂರ್ತಿ ಹನೂರು ಅವರ ಕಥಾ ಸಾಹಿತ್ಯ"

ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯಕ್ಕೆ ಎಂ.ಫಿಲ್. (ಕನ್ನಡ) ಪದವಿಗಾಗಿ ಅರ್ಪಿಸಲಾಗಿದೆ

ಸಂಶೋಧಕ

**ಹೆಚ್.ಜಿ. ಚಂದ್ರಶೇಖರ**

ನೋಂದಣಿ ಸಂಖ್ಯೆ : KRSMKS : ೦೦೪೫೩

ಮಾರ್ಗದರ್ಶಕರು

**ಡಾ. ಎ.ಆರ್. ಮದನ್‌ಕುಮಾರ್,** ಎಂ.ಎ., ಪಿ.ಹೆಚ್‌ಡಿ.

ಪ್ರಾಧ್ಯಾಪಕರು, ಕನ್ನಡ ವಿಭಾಗ

ಮಹಿಳಾ ಸರ್ಕಾರಿ ಪದವಿ ಕಾಲೇಜು, ಮಂಡ್ಯ







ಕರ್ನಾಟಕ ಸಂಘ (ರಿ), ಮಂಡ್ಯ

ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿಯಿಂದ ಮಾನ್ಯತೆ ಪಡೆದಿದೆ)

ಮಂಡ್ಯ

೨೦೦೯-೧೦

# ಪ್ರಮಾಣ ಪತ್ರ

**"ಕೃಷ್ಣಮೂರ್ತಿ ಹನೂರು ಅವರ ಕಥಾಸಾಹಿತ್ಯ"** ಎಂಬ ವಿಷಯದ ಮೇಲೆ ಈ ನಿಬಂಧವನ್ನು **ಡಾ. ಎ.ಆರ್. ಮದನ್‌ಕುಮಾರ್** ಅವರ ಮಾರ್ಗದರ್ಶನದಲ್ಲಿ ನನ್ನ ಸಂಶೋಧನೆಯ ಫಲವಾಗಿ ರಚಿಸಲ್ಪಟ್ಟು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್. (ಕನ್ನಡ) ಪದವಿಗೆ ಅರ್ಪಿಸಿದ್ದೇನೆ.

ಈ ನಿಬಂಧವನ್ನು ಹಿಂದಿನ ವರ್ಷಗಳಲ್ಲಿ ಯಾರೂ ಇಲ್ಲಿಯವರೆಗೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿಲ್ಲವೆಂದು ನಾನು ಇಲ್ಲಿ ಪ್ರಮಾಣೀಕರಿಸುತ್ತಿದ್ದೇನೆ.

ದಿನಾಂಕ : ೩೦.೦೮.೨೦೧೦
ಸ್ಥಳ : ಮಂಡ್ಯ

ಹೆಚ್.ಜಿ. ಚಂದ್ರಶೇಖರ್
**ಚಂದ್ರಶೇಖರ ಹೆಚ್.ಜಿ.**
ಎಂ.ಫಿಲ್. ವಿದ್ಯಾರ್ಥಿ
ನೋಂದಣಿ ಸಂಖ್ಯೆ : KRSMKS – ೦೦೪೫೩

# ದೃಢೀಕರಣ ಪತ್ರ

**"ಕೃಷ್ಣಮೂರ್ತಿ ಹಸೂರು ಅವರ ಕಥಾ ಸಾಹಿತ್ಯ"** ಎಂಬ ವಿಷಯದ ಮೇಲೆ ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್. (ಕನ್ನಡ) ಪದವಿಗೆ ವಿದ್ಯಾರ್ಥಿಯಾದ **ಚಂದ್ರಶೇಖರ ಹೆಚ್.ಜಿ.** ಅವರು ನನ್ನ ಮಾರ್ಗದರ್ಶನ ಹಾಗೂ ಮೇಲ್ವಿಚಾರಣೆಯಲ್ಲಿ ಬರೆದು ಒಪ್ಪಿಸುತ್ತಿದ್ದಾರೆಂದೂ ಹಾಗೂ ಈ ವಿಷಯದ ಬಗ್ಗೆ ಬೇರೆ ಯಾರಿಗೂ ನಾನು ಮಾರ್ಗದರ್ಶನ ಮಾಡಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರ ಸಹಿ.

ದಿನಾಂಕ : ೩೦.೦೮.೨೦೧೦
ಸ್ಥಳ : ಮಂಡ್ಯ

**(ಡಾ. ಎ.ಆರ್. ಮದನ್‌ಕುಮಾರ್)**
ಪ್ರಾಧ್ಯಾಪಕರು, ಕನ್ನಡ ವಿಭಾಗ
ಮಹಿಳಾ ಸರ್ಕಾರಿ ಪದವಿ ಕಾಲೇಜು, ಮಂಡ್ಯ

# ಪರಿವಿಡಿ

ಅಧ್ಯಾಯ – ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

**ಪೀಠಿಕೆ :–**

ಸಮಾಜವು ಇಂದು ತೀರ್ವವಾದ ಬದಲಾವಣೆಗಳಿಗೆ ಒಳಗಾಗುತ್ತಿದೆ. ವೈಜ್ಞಾನಿಕ, ಕೈಗಾರೀಕರಣ, ನಗರೀಕರಣ ಮತ್ತು ಗ್ರಾಮೀಣ ಪರಿಸರಗಳ ಫಲವಾಗಿ ಮಾನವನ ಆಲೋಚನೆಯ ರೀತಿ ಬದಲಾಗುತ್ತಿದೆ. ಸಂಸ್ಕೃತಿಗೆ ಪ್ರತಿಸಂಸ್ಕೃತಿಯ ಹೊಡೆತದಿಂದ ಸಮಾಜದ ಒಂದು ವರ್ಗ ಪ್ರತಿ ಸಂಸ್ಕೃತಿಯನ್ನು ಅನುಸರಿಸಿದವು. ಮತ್ತೊಂದು ವರ್ಗ ಎರಡನ್ನೂ ತಮ್ಮ ಅನುಕೂಲಕ್ಕೆ ಬಳಕೆ ಮಾಡಿಕೊಂಡವು. ಆದರೆ ಮೂಲ ಸಂಸ್ಕೃತಿಯ ಅನುಯಾಯಿಗಳ ಮುಗ್ಧತೆ, ನಂಬಿಕೆಗಳ ಮೇಲೆ ಪ್ರತಿಸಂಸ್ಕೃತಿಯವರು ಮಾಡುತ್ತಿರುವ ಶೋಷಣೆ ಬಯಲಿಗೆ ಬಂದಿದ್ದೇ ಸಾಹಿತ್ಯ ಬರವಣಿಗೆಯಿಂದಾಗಿ, ಸಾಹಿತ್ಯವು ಸಾಮಾಜಿಕ ಸಮಸ್ಯೆಗಳನ್ನು ತನ್ನ ತೆಕ್ಕೆಗೆ ಸೇರಿಸಿಕೊಂಡಾಗಲೆ ಹಿಂದುಳಿದ ವರ್ಗಗಳಿಗೆ ತಮ್ಮ ಮೇಲಾಗುತ್ತಿರುವ ಅನ್ಯಾಯದ ಅರಿವು ಮೂಡಿದ್ದು, ಸ್ವಾತಂತ್ರ್ಯಪೂರ್ವ ಅಂದರೆ ೧೯ನೇ ಶತಮಾನದವರೆಗೂ ಸಾಹಿತ್ಯ ಒಂದು ಕಲೆಯಾಗಿ, ಮೇಲ್ವರ್ಗದ ಬದುಕಿನ ಅನಾವರಣವೇ ಆಗಿತ್ತು. ಆದರೆ ಪಾಶ್ಚಾತ್ಯರ ಪ್ರಭಾವವಾದ ಮೇಲೆ ಸಾಹಿತ್ಯ ತನ್ನ ದಿಕ್ಕು ಬದಲಿಸಿ ಪ್ರತಿಭಟಿಸಿತು.

ಕನ್ನಡ ಸಾಹಿತ್ಯ ೨೦ನೇ ಶತಮಾನದಲ್ಲಿ ಹಲವಾರು ಪ್ರಕಾರಗಳನ್ನು ಸ್ವೀಕರಿಸಿ ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡಿತು, ಭಾವಗೀತೆ, ಕಾದಂಬರಿ, ಸಣ್ಣಕತೆ, ನಾಟಕ, ಆತ್ಮಕಥೆ, ಮಹಾಕಾವ್ಯ ಮತ್ತು ಸಂಸ್ಕೃತಿ ಅಧ್ಯಯನ, ಸಂಶೋಧನೆಗಳು, ಸಾಹಿತ್ಯವನ್ನು ಚುರುಕುಗೊಳಿಸಿದ್ದವು. ಹೀಗೆ ವಿಪುಲವಾಗಿ ಬೆಳೆದಂತಹ ಸಾಹಿತ್ಯವನ್ನು ಸಂಶೋಧನೆ ತನ್ನ ವ್ಯಾಪ್ತಿಗೆ ಸೇರಿಸಿಕೊಂಡು ಹಲವು ಆಯಾಮಗಳೊಡನೆ ಅಧ್ಯಯನ ನಡೆಸುತ್ತಿದೆ. ಪ್ರಾಚೀನ ಕುರುಹುಗಳನ್ನು ಶೋಧಿಸಿ ತೆಗೆದು ಅಧ್ಯಯನ ನಡೆಸುವುದು, ಅದರ ಮೂಲಕ ರಾಜ್ಯ, ಭಾಷೆಯ ಪ್ರಾಚೀನತೆಯನ್ನು ಕಂಡುಹಿಡಿಯುವುದು ನಿಜವಾದ ಸಂಶೋಧನೆ ಎನಿಸಿಕೊಂಡಿತ್ತು. ಅದರ ಜೊತೆಗೆ ಇಂದು ಪ್ರಾಚೀನದಿಂದ ಇಂದಿನವರೆಗೆ ಬರೆದ ಸಾಹಿತ್ಯವನ್ನು ಸಂಶೋಧನೆಯ ವಸ್ತುವಾಗಿಸಿ ಅದರ ಮೂಲಕ ಕವಿ, ಕಾಲ, ದೇಶ, ಭಾಷೆ, ವರ್ಗ, ವಂಶ, ಸಂಸ್ಕೃತಿಯನ್ನು ತಿಳಿಯುವ ಹೊಸ ಪ್ರಯತ್ನ ಆರಂಭಗೊಂಡಿದೆ.

ಹೊಸ ಅಧ್ಯಯನದ ಒಳಗೆ ತೌಲನಿಕ ಅಧ್ಯಯನ, ಒಬ್ಬ ಕವಿಯ ಸಾಹಿತ್ಯದ ಅಧ್ಯಯನ, ಭಾಷೆಯ ಅಧ್ಯಯನ, ಜನಪದ ಅಧ್ಯಯನ ಮತ್ತು ಪ್ರಕಾರಗಳ ಅಧ್ಯಯನವು ರೂಢಿಯಲ್ಲಿದೆ. ಪ್ರಕಾರಗಳಲ್ಲಿ ಮಹಾಕಾವ್ಯಗಳ ಅಧ್ಯಯನ, ಕಾದಂಬರಿಗಳ ಅಧ್ಯಯನ, ಕಾವ್ಯಗಳ ಅಧ್ಯಯನಗಳು ನಡೆದಷ್ಟು ಸಣ್ಣಕಥೆಗಳ ಮೇಲೆ ಇನ್ನೂ ಸಾಕಷ್ಟು ಅಧ್ಯಯನಗಳು ನಡೆಯುತ್ತಿವೆ. ಅದರ ಮೂಲಕ ಸಾಹಿತ್ಯದ ವಾಸ್ತವ

ನಡಿಗೆಯನ್ನು ಅರಿಯುವ ಯೋಗ್ಯ ಅಧ್ಯಯನಗಳು ಸಂಶೋಧನೆಯ ಮೂಲಕ ಸಿಗುತ್ತಿರುವುದು ಸಂತೋಷದ ಸಂಗತಿ. ಹೀಗೆ ಕನ್ನಡ ಸಾಹಿತ್ಯವು ಹಲವಾರು ಪ್ರಕಾರಗಳನ್ನು ತನ್ನ ತೆಕ್ಕೆಯೊಳಗೆ ಸೇರಿಸಿಕೊಂಡು ಬೃಹತ್ತಾಗಿ ಬೆಳೆದು ಬಂದಿದೆ. ಇದರಲ್ಲಿ 'ಸಣ್ಣಕಥೆ' ಪ್ರಕಾರವು ಒಂದು. ಇತ್ತೀಚಿನ ದಿನಗಳಲ್ಲಿ ಇದು ಒಂದು ಪ್ರಕಾರವಾದರೂ ಪ್ರಾಚೀನದಿಂದಲೂ ಕಥೆ ಹೇಳುವ, ಕೇಳುವ ರೂಢಿ ಇದೆ. ನಮ್ಮ ಸಂಸ್ಕೃತಿಗೆ ಕನ್ನಡಿ ಹಿಡಿದಂತೆ ಜನಪದ ಕಥೆಗಳು ಜನರಿಂದ ಜನರಿಗೆ ಹಂಚಿಕೆಯಾಗುತ್ತಾ ಬಂದಿದೆ. ಇಂತಹ ಕಥೆಗಳಿಗೆ ಅಜ್ಜೀ ಕಥೆಗಳೆಂದು ಕರೆದದ್ದು ಉಂಟು. ಇಂತಹ ಕಥೆಗಳು ರಾಜಮಹಾರಾಜರ ಸಾಹಸವನ್ನು ಕುರಿತು ಕಾಲ್ಪನಿಕವಾಗಿ ರಚಿಸಲಾಗುತ್ತಿತ್ತು. ಇದು ೧೯ನೇ ಶತಮಾನದ ಮುದ್ದಣ್ಣನವರೆಗೂ ಮುಂದುವರೆಯುತ್ತಾ ಬಂದಿದೆ. ಆದರೆ ೨೦ನೇ ಶತಮಾನದ ಆರಂಭದಿಂದೀಚೆಗೆ ಭಾರತೀಯ ಜನಜೀವನದಲ್ಲಾದ ಬದಲಾವಣೆ, ಅನ್ಯ ಸಂಸ್ಕೃತಿಯ ಪ್ರಭಾವದಿಂದ ದೇಸಿ ಸಂಸ್ಕೃತಿಯ ಮೇಲಾಗಬಹುದಾದ ಹೊಡೆತದ ಅರಿವಿದ್ದ ಸ್ವತಂತ್ರ ಪೂರ್ವ ಲೇಖಕರು ದೇಸಿಯ ಚಿಂತನೆಯುಳ್ಳ ಕಥೆಗಳನ್ನು ರಚಿಸಿದರು. ಒಂದು ಉದ್ದೇಶವಿಟ್ಟು ಕಥೆ ಬರೆಯುವ ಪ್ರಯತ್ನ ಇಲ್ಲಿಂದಲೇ ಶುರುವಾಯಿತು. ಹೀಗೆ ಶುರುವಾದ ಕಥೆಗಳು ಆಯಾ ಕಾಲದ ಸಮಸ್ಯೆಗಳನ್ನು ವಸ್ತುವಾಗಿಸಿ, ಪರಿಹಾರವನ್ನೊದಗಿಸಿಯೋ, ಸಮಸ್ಯೆಯನ್ನು ತೋರಿಸುತ್ತಾ ಪರಿವರ್ತನೆಯ ಚಿಂತನೆಯನ್ನು ಬಿತ್ತುತ್ತಾ ಬಂದಿವೆ. ಭಾಷೆಯಲ್ಲಿ ಸರಳವಾಗಿ, ನೇರವಾಗಿ, ಸೂಕ್ಷ್ಮವಾಗಿ ಹೇಳುವ ಪ್ರವೃತ್ತಿ ಈ ಕಥನ ಸಾಹಿತ್ಯಕ್ಕೆ ಪ್ರಾಪ್ತವಾದುದು ಇತ್ತೀಚಿನ ಕಥೆಗಳ ಹೆಗ್ಗಳಿಕೆ.

**ಉದ್ದೇಶ :-**

ಸಣ್ಣ ಕತೆಗಳನ್ನು ಕುರಿತು ಸಾಕಷ್ಟು ಅಧ್ಯಯನಗಳು ನಡೆದಿವೆ. ಆದರೂ ಸಹ ಅಂತಿಮವಲ್ಲ, ಮುಕ್ತಾಯವು ಅಲ್ಲ. ಇನ್ನು ಎಲೆಮರೆಯ ಕಾಯಂತೆ ಇರುವ ಸಾಕಷ್ಟು ಉತ್ತಮ ಲೇಖಕರು ನಮ್ಮ ಮುಂದಿದ್ದಾರೆ. ಉತ್ತಮ ಕಥೆಗಳು, ಕಾದಂಬರಿಗಳು, ಕಾವ್ಯಗಳನ್ನು ರಚಿಸಿದ್ದಾರೆ. ಅವರನ್ನು ಗುರುತಿಸುವ ಪ್ರಯತ್ನದತ್ತ ಸಾಗಬೇಕಿದೆ. ಈಗಿರುವ ಸಾಹಿತ್ಯದ ಅರ್ಧದಷ್ಟು ಕುರಿತಾದ ಸಂಶೋಧನೆ ನಡೆದಿಲ್ಲ. ಸಮಾಜ ಮುಖಿಯಾದ, ಬದುಕಿನ ವಾಸ್ತವತೆಯನ್ನು ಅದರ ಸೂಕ್ಷ್ಮ ಎಳೆಗಳನ್ನು ಬಿಚ್ಚಿ ನೋಡುವ ಪ್ರಯತ್ನ ಕಡಿಮೆ ಎನ್ನಬಹುದು. ಇಂತಹ ಸೂಕ್ಷ್ಮತೆಗಳ ಕಡೆಗೆ ಹೆಚ್ಚು ಗಮನ ನೀಡುವ ಉದ್ದೇಶದಿಂದ ಈ ಅಧ್ಯಯನ ಮಾಡುವ ಉತ್ಸಾಹವನ್ನು ತೋರಿದ್ದೇನೆ.

ಪ್ರಪಂಚದ ಹಲವಾರು ಕಥೆಗಳ ವಸ್ತುವಿನ ದೃಷ್ಟಿಯಲ್ಲಿ ವಿಚಾರ ಮಾಡುವುದಾದರೆ, ಪಾಚೀನ ಕಥೆಗಳಿಗೂ, ೨೦ನೇ ಶತಮಾನದಿಂದೀಚೆಗಿನ ಕಥೆಗಳಿಗೂ ಸೂಕ್ಷ್ಮ ಎಳೆಯ ಅಂತರವಿದೆ. ಹಿಂದಿನ ಕಥೆಗಳು ವ್ಯಕ್ತಿ ಕೇಂದ್ರಿತ ಹಾಗೂ ಕಾಲ್ಪನಿಕತೆಯುಳ್ಳ ಮನರಂಜನೆಯುಳ್ಳ ಕಥೆಗಳು. ಆದರೆ ಇಂದಿನ ಕಥೆಗಳು ವ್ಯಕ್ತಿಯ ಅಂತರಂಗದ ತುಡಿತಗಳುಳ್ಳ, ಜೀವನಾನುಭವದ, ಕಟು ವಾಸ್ತವದ ಕಥೆಗಳಾಗಿವೆ. ಈ

ಎರೆಡು ಬಗೆಯ ವ್ಯತ್ಯಾಸಗಳಿಗೂ ಕಾಲಮಾನದ ಸಂಘರ್ಷ, ಸ್ವಾತಂತ್ರ್ಯ, ಸಮಾಜದ ನಡುವೆ ನಿಂತು ಯಾರನ್ನೂ ಹೊಗಳದೆ, ಯಾರನ್ನೂ ತೆಗಳದೆ, ಮಾನವೀಯ ಮೌಲ್ಯಗಳನ್ನು ತಿಳಿಸುವ ಕಥೆಗಳು. ಇಂತಹ ವಿಭಿನ್ನ ನೆಲೆಗಳುಳ್ಳ ಕಥೆಗಳು ವ್ಯಕ್ತಿ ಮತ್ತು ಸಮಾಜದ ಮೇಲೆ ಉಂಟುಮಾಡುವ ಪರಿಣಾಮಗಳು, ಆಗುವ ಬದಲಾವಣೆಗಳನ್ನು ಅಧ್ಯಯನದ ಮುಖಾಂತರ ಅರಿಯಬೇಕೆಂಬ ಆಸೆ ನನ್ನದು.

ಸಮಾಜದ ದಿನನಿತ್ಯ ಹೋರಾಟ ಇಂದು ಸಾಹಿತ್ಯದ ಬೆಂಬಲದೊಂದಿಗೆ ಹೆಚ್ಚು ಪರಿಣಾಮಕಾರಿಯಾದಂತಹ ಪ್ರಭಾವವನ್ನು ಬೀರುತ್ತಿದೆ. ಕಾಲದಿಂದ ಕಾಲಕ್ಕೆ ಸಾಹಿತ್ಯದ ಉದ್ದೇಶವು ಪರಿಸ್ಥಿತಿಗೆ ಅನುಗುಣವಾಗಿ ವ್ಯಕ್ತಿ ಮತ್ತು ಸಮಾಜಕ್ಕೆ ಅನುಕೂಲವೂ, ಅನಾನುಕೂಲವೂ ಆಗುತ್ತಾ ಬಂದಿದೆ. ಇಂತಹ ಸವಾಲುಗಳನ್ನರಿತ ಸಾಹಿತಿ ಸಮಾಜಿಕ ಬದ್ಧತೆಯ ಅರಿವುಳ್ಳ ಉತ್ತಮ ಕೃತಿಯ ರಚನೆಗೆ ಪ್ರಯತ್ನಿಸುತ್ತಾನೆ. ಇಂತಹ ಕೃತಿಗಳು ಸಾಮಾನ್ಯ ಓದುಗರ ಮನ ಮುಟ್ಟದೆ ಹೋಗಬಹುದು. ಆದರೆ ಒಬ್ಬ ಸಂಸ್ಕೃತಿ, ಸಮಾಜದ ಚಿಂತಕ ಒಪ್ಪುತ್ತಾನೆ. ಎಲ್ಲರನ್ನೂ ಈ ಚಿಂತನೆಯ ಎಡೆಗೆ ಎಳೆಯುವ ಬರಹಗಳ ಅವಶ್ಯಕತೆ ಇದೆ. ಅಂತಹ ಬರಹಗಳು ಬಂದಿರಲೂಬಹುದು. ಅಂತಹ ಕೃತಿಗಳನ್ನು ಒಬ್ಬ ಓದುಗ, ವಿಮರ್ಶಕ, ಸಂಶೋಧಕ ತನ್ನ ಸಮಗ್ರ ಓದಿನಿಂದ ಸಮಾಜದ ಮುಂದಿಡುವ ಜವಾಬ್ದಾರಿ ಹೊತ್ತಿರುತ್ತಾನೆ. ಸಾಮಾಜಿಕ ಅರಿವನ್ನಿಟ್ಟು ಓದುವ ಪ್ರತಿಯೊಬ್ಬ ಓದುಗನೂ ಒಬ್ಬ ಸಂಶೋಧಕನೇ ಆಗುತ್ತಾನೆ.

ಇಪ್ಪತ್ತನೇ ಶತಮಾನದ ಸಾಹಿತ್ಯ ಚರಿತ್ರೆ ಅತ್ಯಂತ ವೈವಿಧ್ಯತೆ ಹಾಗೂ ವ್ಯಾಪಕತೆಯನ್ನು ಪಡೆದಿದೆ. ದೇಸೀಯ ಸಂಸ್ಕೃತಿಯ ಚಿಂತನೆಗೆ ದಿಕ್ಕು ತೋರಿ, ಎಲ್ಲೋ ಮರೆಯಾಗಿ ಯಾರಿಗೂ ಕಾಣದೆ ಇದ್ದ ಕಾಡುವಾಸಿಗಳ ಬದುಕೂ ಕೂಡ ನಮ್ಮ ಸಂಸ್ಕೃತಿ, ಕೆಳ ವರ್ಗದವರ ಬದುಕು ಕೂಡ ನಮ್ಮ ಸಂಸ್ಕೃತಿಯ ಭಾಗ ಎಂದು ಸಾಹಿತ್ಯಿಕ ರೂಪದಲ್ಲಿ ದಾಖಲಿಸಿದ ಕಾಲ. ಅದರಲ್ಲೂ ಕಥಾ ಸಾಹಿತ್ಯವಂತೂ ಅತಿ ಪರಿಣಾಮಕಾರಿಯಾಗಿ, ಸೂಕ್ಷ್ಮವಾಗಿ, ಪ್ರತಿಭಟನೆಯಾಗಿ, ನವೋದಯ, ನವ್ಯ, ಪ್ರಗತಿಶೀಲ, ದಲಿತ, ಬಂಡಾಯ ಪಂಥದ ಲೇಖಕರು ಬರೆದರು. ಕಥಾ ಸಾಹಿತ್ಯದ ಮೇಲೆ ಪಾಶ್ಚಾತ್ಯ ಪ್ರಭಾವ ಆರಂಭ ಕಾಲದಲ್ಲಿ ಆದರೂ ಸಹ ಸ್ವಂತಿಕೆಯಿಂದ ಸಣ್ಣ ಕಥೆಗಳನ್ನು ಬರೆದರೆನ್ನಬಹುದು. ಆದರೆ ಕಥೆಗಳ ಉದ್ದೇಶ ಬದಲಾದದ್ದು ಈ ಹಂತದಲ್ಲಿಯೇ ಅಲ್ಲಿಯವರೆಗೂ ಕೇವಲ ಮನರಂಜನೆಗಾಗಿ ಇದ್ದ ಕಥೆಗಳು ಒಂದು ಚಿಂತನೆಗೆ ಒಳಪಟ್ಟವು. ಅನೇಕ ಲೇಖಕರು ಜೀವನ ಏನೆಂದು ಬರೆದರೆ, ಕೆಲವರು ಜೀವನಾನುಭವಗಳನ್ನೇ ಕಥೆಯಾಗಿಸಿದರು, ಅಸ್ವಸ್ಥ ಸಮಾಜದ ಪ್ರತಿರೂಪವೇ ಕಥೆಯಾದವು, ನಿಜ ಜೀವನದಲ್ಲಾಗದ ಕೇವಲ ಮಾತಾಗಿರುವ ಆದರ್ಶಗಳೇ ಕಥೆಯಾದವು. ಸಂಸ್ಕೃತಿಯ ಪ್ರತಿಬಿಂಬವಾದ ದಾಂಪತ್ಯದ ಎಡರುತೊಡರುಗಳೇ ಕಥೆಯಾದವು. ಈ ರೀತಿಯ ಕಥೆಗಳು ಸಾಹಿತ್ಯಿಕ ಭಾಗವಾಗಿ ಸಮಾಜದ ಕನ್ನಡಿಯಾಗಿ ಪ್ರಸ್ತುತ ಕಾಲಮಾನದ ಜೊತೆ ಅಧ್ಯಯನ ನಡೆಸುವ ಉದ್ದೇಶ ಉತ್ತಮವೆನಿಸುತ್ತದೆ.

ಇದುವರೆಗೂ ಸಣ್ಣಕಥೆ ಅಥವಾ ಕಥಾ ಸಾಹಿತ್ಯ ಕುರಿತಂತೆ ಸಾಕಷ್ಟು ಅಧ್ಯಯನಗಳು ನಡೆದಿವೆ. ಅವುಗಳೆಂದರೆ ೧) ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ, ೨) ಶ್ರೀನಿವಾಸರ ಕಥಾಸಾಹಿತ್ಯ, ೩) ಆಧುನಿಕ ಸಣ್ಣ ಕಥೆಗಳಲ್ಲಿ ದಲಿತ ಜೀವನ, ೪) ನವೋದಯ ಕಥಾ ಸಾಹಿತ್ಯದಲ್ಲಿ ಗ್ರಾಮ ಸಮಾಜ ಹೀಗೆ ಕಥಾ ಸಾಹಿತ್ಯದ ಒಳಗೆ ವಿವಿಧ ರೀತಿಯ ಅಧ್ಯಯನಗಳು ನಡೆದಿವೆ. ಆದರೂ ಸಹ ಅಧ್ಯಯನ ವ್ಯಾಪ್ತಿಗೆ ಒಳಪಡದೆ ಇರುವ ಸಾಕಷ್ಟು ಪ್ರಬುದ್ಧ ಕಥೆಗಾರರು ಇದ್ದಾರೆ, ಅಂತಹ ಸಜ್ಜನಿಕೆಯ, ಸೃಜನಶೀಲ ಕಥೆಗಾರರು ಹಾಗೂ ಕಾದಂಬರಿಕಾರರೂ ಆದ ಕೃಷ್ಣಮೂರ್ತಿ ಹನೂರು ಅವರು ಕೂಡ ಒಬ್ಬರು. ಸುಮಾರು ೪ ದಶಕಗಳಿಂದ ಬರವಣಿಗೆಯಲ್ಲಿ ತೊಡಗಿಕೊಂಡಿದ್ದಾರೆ. ಹನೂರು ಅವರು ಮೂಲತಃ ಜಾನಪದ ವಿದ್ವಾಂಸರು. ಇವರ 'ಕತ್ತಲದಾರಿ ದೂರ', ಜನಪದ ವೀರಗೀತೆಗಳು, ಜನಪದ ಕಥಾಸಂಕಲನಗಳು, ಬುಡಕಟ್ಟು ಸಂಶೋಧನಾ ಕೃತಿಯಾದ 'ಮ್ಯಾಸಬೇಡರ ಸಂಸ್ಕೃತಿ' ಹೀಗೆ ಜನಪದ ಕ್ಷೇತ್ರದಲ್ಲಿ ಅಪಾರ ಶ್ರಮವಹಿಸಿ ಸೇವೆ ಸಲ್ಲಿಸಿದ್ದಾರೆ. ಜಾನಪದ ಕ್ಷೇತ್ರದಲ್ಲಾದ ಅಪಾರ ಅನುಭವಗಳ ಹಿನ್ನಲೆಯಲ್ಲಿ, ಹಿರಿಯ ಸಾಹಿತಿಗಳ ಬರಹದ ಮೇಲಾಗಿರುವ ಪ್ರಭಾವ, ಪಾಶ್ಚಾತ್ಯ ಬರಹಗಾರರ ಪ್ರಭಾವದಿಂದ ತಮ್ಮ ಸೃಜನಶೀಲ ಕಥೆಗಳನ್ನು ಬರಹದ ರೂಪದಲ್ಲಿ ಇಳಿಸಿದ್ದಾರೆ. ಕಾದಂಬರಿಯಾಗಿಸಿದ್ದಾರೆ. ಇವರ ಕಥಾ ಸಂಕಲನಗಳಾದ 'ಕೇರಿಗೆ ಬಂದ ಹೋರಿ', 'ಕತ್ತಲಲ್ಲಿ ಕಂಡ ಮುಖ', 'ಕಳೆದ ಮಂಗಳವಾರ ಮುಸ್ಸಂಜೆ' ಹಾಗೂ ಕಾದಂಬರಿಗಳಾದ 'ಬಾರೊಗೀಜಗನೆ' ಮತ್ತು 'ನಿಕ್ಷೇಪ' ಒಟ್ಟು ಮೂರು ಕಥಾಸಂಕಲನ ಎರೆಡು ಕಾದಂಬರಿಗಳನ್ನು ಒಳಗೊಂಡಂತೆ ಅಧ್ಯಯನದ ವ್ಯಾಪ್ತಿ ವಿಸ್ತಾರಗೊಂಡಿದೆ.

ಕೃಷ್ಣಮೂರ್ತಿ ಹನೂರು ಅವರ ಕಥೆ ಮತ್ತು ಕಾದಂಬರಿಗಳು ಕನ್ನಡ ಸಾಹಿತ್ಯ ಪಡೆದಿರುವ ಅರ್ಥಪೂರ್ಣ ತಿರುವನ್ನು ಮತ್ತು ಸಾಧಿಸಿರುವ ವಸ್ತು-ವೈವಿಧ್ಯತೆಯನ್ನು ಪ್ರತಿನಿಧಿಸುತ್ತದೆ. ನಗರೀಕರಣ ಮತ್ತು ಸುಸಂಸ್ಕೃತ ವರ್ಗದ ಜನರ ಸಮಸ್ಯೆಗಳು, ಹಿಂದೆ ಸರಿದು, ಅಲಕ್ಷಿತ ಜನಾಂಗದ, ಅಲೆಮಾರಿಗಳ, ದಲಿತರ, ಸ್ತ್ರೀಯರ ಅನುಭವ ಮತ್ತು ಅದರ ಸ್ಥಿತಿಗತಿಗಳನ್ನು ಆಪ್ತವಾಗಿ ಚಿತ್ರಿಸುವ ನೂತನ ಕಥೆಗಾರರಲ್ಲಿ ಇವರು ಒಬ್ಬರು. ಇಂತಹ ವಿಶಿಷ್ಟ ವಸ್ತು, ನಿರೂಪಣೆ, ವಾಸ್ತವ ಸಂಗತಿಗಳುಳ್ಳ ಇವರ ಕಥೆ ಮತ್ತು ಕಾದಂಬರಿಗಳನ್ನು ಪ್ರಸ್ತುತ ಎಂ.ಫಿಲ್.ಗೆ ಸಾದರಪಡಿಸುವ ಪ್ರಬಂಧದ ವ್ಯಾಪ್ತಿ ಹಾಗೂ ಮಿತಿಗೆ ಅನುಗುಣವಾಗಿ ಇವರ ಕಥಾ ಸಾಹಿತ್ಯವನ್ನಷ್ಟೇ ಆಯ್ಕೆ ಮಾಡಿಕೊಂಡು ನಾನು ಅಧ್ಯಯನಕ್ಕೆ ಒಳಪಡಿಸಿರುತ್ತೇನೆ.

ಮೊದಲ ಅಧ್ಯಾಯವಾದ 'ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ'ಯಲ್ಲಿ ಪ್ರಸ್ತುತ ಅಧ್ಯಯನಗಳ ಹೆಜ್ಜೆಯನ್ನು ಹಾಗೂ ಈ ಅಧ್ಯಯನದ ಉದ್ದೇಶ ಮತ್ತು ವಿಷಯದ ವ್ಯಾಪ್ತಿಯನ್ನು ಹೇಳಲಾಗಿದೆ.

'ಕನ್ನಡ ಕಥಾ ಸಾಹಿತ್ಯದ ಸ್ವರೂಪ' ಎರಡನೇ ಅಧ್ಯಾಯವಾಗಿದೆ. ಇಲ್ಲಿ ಕನ್ನಡ ಕಥಾ ಸಾಹಿತ್ಯ ಪರಂಪರೆಯ ಪ್ರಾರಂಭದ ಹಂತದಿಂದ ಯಾವ ಯಾವ ಪಂಥಗಳು

ಬೆಳೆಸಿಕೊಂಡು ಬಂದಿವೆ. ಅದರ ಒಟ್ಟಾರೆ ಸ್ವರೂಪವನ್ನು ಹೇಳುತ್ತಾ, ಸಣ್ಣ ಕತೆಗಳ ಇಂದಿನ ಪ್ರಭಾವವನ್ನು ತಿಳಿಸಿಕೊಡಲಾಗಿದೆ.

'ಕೃಷ್ಣಮೂರ್ತಿ ಹನೂರು ಅವರ : ಜೀವನ ಮತ್ತು ವ್ಯಕ್ತಿತ್ವ' ಮೂರನೇ ಅಧ್ಯಾಯವಾಗಿದೆ. ಕತೆಗಾರರ ಬಾಲ್ಯದಿಂದ ಇಂದಿನವರೆಗಿನ ಅವರ ಜೀವನ, ವೃತ್ತಿಜೀವನ ಕ್ಷೇತ್ರ ಕಾರ್ಯ, ಸೃಜನಶೀಲ ಬರವಣಿಗೆ ಮತ್ತು ವ್ಯಕ್ತಿತ್ವದ ಸಂಪೂರ್ಣ ವಿಷಯವನ್ನು ತಿಳಿಸಿದ್ದೇನೆ.

'ಕೃಷ್ಣಮೂರ್ತಿ ಹನೂರು ಅವರ ಸಣ್ಣಕತೆಗಳು' ನಾಲ್ಕನೇ ಅಧ್ಯಾಯವಾಗಿದೆ. ಇಲ್ಲಿ ಸಣ್ಣಕತೆಗಳನ್ನು ಸಾಮಾಜಿಕವಾಗಿ, ಜಾನಪದೀಯ ಮತ್ತು ಬುಡಕಟ್ಟು ಹಿನ್ನೆಲೆಗಳಲ್ಲಿ ಅಧ್ಯಯನಕ್ಕೆ ಒಳಪಡಿಸುತ್ತೇನೆ.

'ಕೃಷ್ಣಮೂರ್ತಿ ಹನೂರು ಅವರ ಕಾದಂಬರಿಗಳು' ಐದನೇ ಅಧ್ಯಾಯವಾಗಿದೆ. ಇಲ್ಲಿ ಎರಡು ಕಾದಂಬರಿಗಳನ್ನು ಸಾಮಾಜಿಕ ನೆಲೆಯಲ್ಲಿ ನಿಂತು, ವ್ಯವಸ್ಥೆಯ ಸದ್ಯದ ಪರಿಸ್ಥಿತಿಗಳೊಡನೆ ಹೋಲಿಸಿ ಅಧ್ಯಯನಕ್ಕೆ ಒಳಪಡಿಸಿದ್ದೇನೆ.

ಒಟ್ಟಾರೆ ಕಥಾಸಾಹಿತ್ಯದ ಅಧ್ಯಯನ ಏಕಮಾನವಾಗದೆ ಬಹುಮುಖವಾಗಿ ಎಲ್ಲೂ ನಿಲ್ಲದೆ ಹರಿವ ನೀರಾಗುವಂತೆ ಎಚ್ಚರ ವಹಿಸಲಾಗಿದೆ. ಈ ಹಿನ್ನಲೆಯಲ್ಲಿ ನಿಬಂಧಕ್ಕೆ ತನ್ನದೇ ಆದ ಸಾಮಾಜಿಕ ಮೌಲ್ಯ ಸಿಗುವಂತಾಗಲಿ. ಇಂತಹ ಮೌಲ್ಯಗಳ ಕಡೆ ಹೆಚ್ಚು ಗಮನ ಕೊಡುವ ಅಧ್ಯಯನವೇ ಈ ಕಥಾ ಸಾಹಿತ್ಯದ ಅಧ್ಯಯನವಾಗಿದೆ.

## ಅಧ್ಯಾಯ – ೨

# ಕನ್ನಡ ಕಥಾ ಸಾಹಿತ್ಯದ ಸ್ವರೂಪ

ಸಾಹಿತ್ಯ ಪ್ರಕಾರಗಳಲ್ಲಿ ಸಣ್ಣಕತೆ ಪ್ರಾಚೀನವಾದುದು. ಇದರ ಮೂಲವನ್ನು ಮೌಖಿಕ ಪರಂಪರೆಯಲ್ಲಿ ಕಾಣಬಹುದಾಗಿದೆ. ಅಕ್ಷರ ವಿದ್ಯೆಯಿಲ್ಲದ ಜನರೂ ಕೂಡ ಕಟ್ಟಿ ಹಾಡಿರುವ ಗೀತೆಗಳು, ಕಥೆಗಳು ಎಲ್ಲಾ ಭಾಷೆಗಳಲ್ಲಿಯೂ ಕಂಡುಬರುತ್ತದೆ. ಆದ್ದರಿಂದಲೇ ಜಾನಪದ ಸಾಹಿತ್ಯದ ಒಂದು ಪ್ರಕಾರವಾಗಿಯೂ ಸಣ್ಣಕತೆಗಳನ್ನು ಗುರುತಿಸಬಹುದು. ಪ್ರಾಚೀನ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತದಲ್ಲಿನ ಉಪಕಥೆಗಳು, ಪಂಚತಂತ್ರ, ಕಥಾಸರಿಸ್ಸಾಗರ, ಅರೇಬಿಯನ್ ನೈಟ್ಸ್ ಕನ್ನಡದ ಪ್ರಕಾರಕ್ಕೆ ಉತ್ತಮ ಉದಾಹರಣೆಗಳಾಗಿವೆ.ಮನುಷ್ಯ ಹುಟ್ಟಿದಂದಿನಿಂದಲೂ ಜೊತೆಜೊತೆಯಲ್ಲಿಯೇ ಕಥೆಗಳೂ, ಹುಟ್ಟಿ ಬಂದವು. ಹೀಗೆ ಒಬ್ಬರಿಂದ ಇನ್ನೊಬ್ಬರಿಗೆ ಸಾಗುತ್ತಿದ್ದ ಕಥೆಯು ಕಾಲ–ದೇಶ–ಪರಿಸರ ಹಾಗೂ ಅವರವರ ಮಾತಿನ ಕಲ್ಪನೆಗಳಿಗಾನುಸಾರವಾಗಿ ಬದಲಾಗುತ್ತಾ ಬೆಳೆಯುತ್ತಾ ಬಂದಿವೆ.

ಪ್ರಾಚೀನ ಕಥೆಗಳಿಗೂ ಇಂದಿನ ಕಥೆಗಳಿಗೂ ಸ್ವರೂಪದಲ್ಲಿ ಸಾಕಷ್ಟು ಬದಲಾವಣೆಗಳಿವೆ. "ತಾರ್ಕಿಕವಾಗಿ ಆಲೋಚಿಸಿದರೆ ಅವು ಸಣ್ಣಕತೆಗಳಂತೆ ಮನುಷ್ಯ ಕೇಂದ್ರಿತ ನೆಲೆಯುಳ್ಳವಲ್ಲ ;" ಒಂದು ಬಗೆಯ ಭ್ರಮಾತ್ಮಕ ಕಲ್ಪನೆಗಳು."[೧] ಆದರೆ ಆಧುನಿಕ ಸಣ್ಣಕಥೆಗಳು ಅವುಗಳಿಗಿಂತ ತೀರಾ ಭಿನ್ನ ನೆಲೆಯುಳ್ಳವು. ವಸ್ತು, ಶೈಲಿ, ನಿರೂಪಣೆಯೂ ಕೂಡ ಬೇರೆಯಾಗಿದೆ ೨೦ನೇ ಶತಮಾನದ ಸಣ್ಣಕತೆಗಳು. ಪ್ರಾಚೀನ ಕಾಲದ ಕಥೆಗಳ ಕಸಿ ಮಾಡಿದ ಹೊಸ ಸೃಷ್ಟಿಯಾಗಿ ನಮ್ಮ ಮುಂದಿವೆ. ಅತ್ಯಂತ ಜನಪ್ರಿಯತೆಯನ್ನು ಪಡೆದಿವೆ.

ಕಾದಂಬರಿಯಂತೆ ಪ್ರಾಥಮಿಕ ಹಂತದಲ್ಲಿ ಯಶಸ್ಸು ಕಾಣದ ಸಣ್ಣಕಥೆ ನಂತರದ ದಿನಗಳಲ್ಲಿ ನೆಲೆಯೂರಿತು. ಹೊಸ ಪ್ರಕಾರದ ಯಾವುದೇ ಸಾಹಿತ್ಯ ಓದುಗರನ್ನು ಸೆಳೆಯುವಲ್ಲಿ ಸೋಲುತ್ತದೆ. ಪಾಶ್ಚಾತ್ಯ ಕಾದಂಬರಿಕಾರರಾದ ಡಿಕ್ಸನ್, ಸ್ಟೀಪನ್‌ಸನ್ ೧೫ ನೇ ಶತಮಾನದಲ್ಲೆ ಸಣ್ಣಕಥೆಗಳನ್ನು ಬೆರೆದರಾದರೂ ಅವರ ಕಾದಂಬರಿಗೆ ಸಿಕ್ಕ ಮಾನ್ಯತೆ ಸಣ್ಣಕಥೆಗಳಿಗೆ ಸಿಗಲಿಲ್ಲ. ನಂತರ ಸಣ್ಣಕಥೆಗಳನ್ನು ಬರೆದೂ ಕೂಡ ಯಶಸ್ವಿಯಾದವರೆಂದರೆ ಅಮೆರಿಕಾದ 'ಎಡ್ಗರ್ ಆಲನ್ ಪೊ, ಓ ಹೆನ್ರಿ, ಇಂಗ್ಲೆಂಡಿನ ಅರ್ನಾಲ್ಡ್ ಬೆನೆಟ್, ಸಾಮರ್ ಸೆಟ್‌ಮಾಮ್, ಥಾಮಸ್ ಹಾಡಿಕ್ ಪ್ರಮುಖರು. ಆದರೂ ಇಂಗ್ಲೀಷ್ ಸಾಹಿತ್ಯದ ಯಾವ ಇತಿಹಾಸದಲ್ಲೂ ಸಣ್ಣಕಥೆಗೆ ಪ್ರತ್ಯೇಕ ಸ್ಥಾನ ಸಿಕ್ಕಿಲ್ಲ.

ಸಣ್ಣಕಥೆ ಇಂದಿಗೂ ಸಾಹಿತ್ಯ ವಿಮರ್ಶೆಯಲ್ಲಿ ನಿರ್ಲಕ್ಷ್ಯಕ್ಕೆ ಒಳಗಾದ ಸಾಹಿತ್ಯ ಪ್ರಕಾರವಾಗಿ ಉಳಿದಿದೆ. ಸಣ್ಣ ಕಥೆಯನ್ನು ಒಂದು ವಿಶಿಷ್ಟ ಸಾಹಿತ್ಯ ಪ್ರಕಾರವಾಗಿ ಗಂಭೀರವೆಂದು ತೆಗೆದುಕೊಂಡು, ಅದರಲ್ಲೂ ವಿಶೇಷವಾಗಿ ಕಾದಂಬರಿಗಿಂತ ಹೇಗೆ ಭಿನ್ನ ಎಂದು ಗುರುತಿಸುವ ಅದರ ವಿಶಿಷ್ಟ ಸಾಧ್ಯತೆಗಳನ್ನು ಎತ್ತಿ ತೋರಿಸುವ ಪ್ರತ್ಯೇಕ ಸಾಹಿತ್ಯ ಮೀಮಾಂಸೆ ಬೆಳೆದಿಲ್ಲ. ಸದ್ಯಕ್ಕೆ ಕಾದಂಬರಿ, ವಿಮರ್ಶೆಗೆ ಬಳಸುವ

ಮಾನದಂಡಗಳನ್ನು ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಸಣ್ಣ ಕಥೆಯ ವಿಮರ್ಶೆಗೂ ಬಳಸಲಾಗುತ್ತಿದೆ.

ಕಾದಂಬರಿ ಮತ್ತು ಸಣ್ಣಕಥೆಗಳೆರಡರ ನಡುವೆ ಮೇಲುನೋಟಕ್ಕೆ ಗಾತ್ರದಲ್ಲಿಯೇ ಭಿನ್ನತೆಯನ್ನು ಗುರುತಿಸಬಹುದು. ಆದರೆ ವಸ್ತು, ಕಥೆ, ಜೀವನಸೃಷ್ಟಿ, ಸಂಭಾಷಣೆ ನಿರೂಪಣೆ, ದೃಷ್ಟಿಕೋನ, ಓದಿಸಿಕೊಳ್ಳುವ ಸಮಯ, ವಿಚಾರದ ಆಳ ಎರಡರಲ್ಲೂ ಭಿನ್ನತೆ ಇದ್ದರೂ ಅವೆರಡೂ ಒಂದೇ ಅಲ್ಲ, 'ಸಣ್ಣಕಥೆ ಕಾದಂಬರಿಯ ಸಂಕ್ಷಿಪ್ತ ರೂಪ' ಎಂಬ ಮಾರ್ಕ್ ಶೋರರ್ ಹೇಳಿಕೆ ಕಾದಂಬರಿ ಮತ್ತು ಸಣ್ಣಕಥೆಗಳ ನಡುವೆ ಇರುವ ವ್ಯತ್ಯಾಸವನ್ನು ತಿಳಿಸುತ್ತದೆ. ಆದರೆ ಕನ್ನಡದ 'ಸುಬ್ಬಣ್ಣ', 'ನಿಗೂಢ ಮನುಷ್ಯರು', 'ಒಡಲಾಳ' ದಂತಹ ಕೃತಿಗಳನ್ನು ಸಣ್ಣಕಥೆ ನೀಳ್ಗತೆ, ಕಾದಂಬರಿ ಈ ಮೂರರಲ್ಲಿ ಯಾವುದಕ್ಕೆ ನಿರ್ಧರಿಸಿ ಹೇಳುವ ಗೊಂದಲ ಇನ್ನೂ ಇದೆ ಹಾಗಾಗಿ ಕಾದಂಬರಿ ಮತ್ತು ಸಣ್ಣ ಕಥೆಯ ಇಂತಹ ಹೋಲಿಕೆ ವ್ಯತ್ಯಾಸಗಳನ್ನಿಟ್ಟುಕೊಂಡು ನಾವು ಅವುಗಳ ಸ್ವರೂಪ, ವೈಶಿಷ್ಟ್ಯತೆಗಳನ್ನು ತಿಳಿಯಬೇಕಾಗಿದೆ.

ಪ್ರತಿಯೊಂದು ಸಾಹಿತ್ಯ ಪ್ರಕಾರವೂ ಗ್ರಹಿಸುವ ಜೀವನದ ಸ್ವರೂಪ ಭಿನ್ನವಾಗಿರುತ್ತದೆ ಮತ್ತು ಅದು ಜೀವನವನ್ನು ಗ್ರಹಿಸುವ ರೀತಿ ಕೂಡ ಅದಕ್ಕೆ ವಿಶೇಷವಾಗಿರುತ್ತದೆ. ತನ್ನನ್ನು ತಾನು ಓದಿಸಿಕೊಳ್ಳುವಾಗಲೇ ತಾನು ಇಂಥ ಪ್ರಕಾರಕ್ಕೆ ಸೇರಿದ್ದೆಂದು ಸಹಜವಾಗಿ ತಿಳಿಯುವಂತಿರುತ್ತದೆ. ಹಾಗಾಗಿ ಓದುಗರು ಆ ರೂಢಿಗಳನ್ನು ಸಹಜವೆಂದು ಒಪ್ಪಿಕೊಳ್ಳುವಂತೆ ಒತ್ತಾಯಿಸುತ್ತದೆ. ಒಂದು ಪ್ರಕಾರದಲ್ಲಿ ಸಹಜವೆನ್ನಿಸುವ ಸಂಗತಿ ಮತ್ತೊಂದರಲ್ಲಿ ಅಸಹಜವೆನ್ನಿಸುತ್ತದೆ. ಆದ್ದರಿಂದ ಸಣ್ಣಕಥೆ ಕುರಿತು ಅನೇಕ ವಿದ್ವಾಂಸರು ವಿವಿಧ ರೀತಿಯ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ.

ಪ್ರಸಿದ್ಧ ಕಥೆಗಾರ ಫ್ರ್ಯಾಂಕ್ ಓ ಕಾನರ್ "ಸಣ್ಣಕಥೆ ಮತ್ತು ಕಾದಂಬರಿಗಳ ನಡುವೆ ಇರುವ ಅಂತರ ಉದ್ದದ್ದಲ್ಲ"[೨] ಎನ್ನುತ್ತಾನೆ. ಕಾದಂಬರಿ ಅನ್ವಯಿಕ ಕಥನಕಲೆ, ಸಣ್ಣಕಥೆ ಶುದ್ಧ ಕಥನ ಕಲೆ ಎಂದಿದ್ದಾನೆ. ಕಾದಂಬರಿ ತನ್ನೊಳಗೆ ಅನವಶ್ಯಕ ವಿವರಣೆಯನ್ನು ಒಳಗೊಂಡಿರಬಹುದು ಆದರೆ ಸಣ್ಣಕಥೆಗೆ ಸಂಕ್ಷಿಪ್ತತೆಯ ಉಸಿರು. ಇದುವರೆಗೂ ಚಿಕ್ಕ ಪ್ರಕಾರವಾಗಿಯೇ ಸಣ್ಣಕಥೆ ಗುರುತಿಸಿಕೊಂಡುಬಂದಿದೆ. ಇದು ಸಂಕೀರ್ಣತೆ, ವಿವರಣೆ, ಸೂಕ್ಷ್ಮತೆ, ಜೀವನದ ಹರವು, ಗುಣ ಮೊದಲದ ಅವಶ್ಯಕ ಅಂಶಗಳನ್ನೊಳಗೊಂಡ ಕಾದಂಬರಿಯಂತೆ ಅಲ್ಲ. ಏಕೆಂದರೆ ಇದರ ವ್ಯಾಪ್ತಿಯೇ ಚಿಕ್ಕದು ಹಾಗಾಗಿ ಇದನ್ನು ವೈಯುಕ್ತಿಕ ಕಲೆ ಎಂದೇ ಹೇಳಬಹುದು. ಈ ಹಿನ್ನಲೆಯಲ್ಲಿ ವ್ಯಕ್ತಿಗಳ ಅನುಭವ, ಅನಿಸಿಕೆ, ಬದಲಾವಣೆಯ ಮಿಂಚು, ಒಳನೋಟಗಳನ್ನು ಅತ್ಯಂತ ಹರಿತವಾಗಿ ಹೇಳಬಲ್ಲದು. ಆದರೆ ಅದು ಪ್ರಕಟಿಸುವ ದರ್ಶನ ಸೀಮಿತ ಚೌಕಟ್ಟಿಗೆ ಒಳಪಟ್ಟಿದ್ದು. ಇಲ್ಲಿನ ಅರ್ಥ ಅಶಾಶ್ವತವೂ, ಪೂರ್ಣವಾಗಿರದೆ ಆಂಶಿಕವಾಗಿರುತ್ತದೆ. ಜೀವನದ ಒಂದು ಸಾಧ್ಯತೆಯಾಗಿರುತ್ತದೆ.

ಸಣ್ಣಕಥೆಯು ಜೀವನಕ್ಕೆ ಬೇಕಾದ ಸಣ್ಣ ಸಣ್ಣ ಅರಿವನ್ನಷ್ಟೇ ನೀಡಲು ಸಾಧ್ಯ. ಕಾದಂಬರಿಯಂತೆ ಬದುಕಿನ ನೈತಿಕ ಬದಲಾವಣೆಯನ್ನು ನೀಡಲು ಸಾಧ್ಯವಿಲ್ಲ.

ಕಾದಂಬರಿ ಬದುಕಿನ ಎಲ್ಲ ಸ್ತರದ ಅರಿವನ್ನು ಹಂತ ಹಂತವಾಗಿ ನಿಧಾನಗತಿಯಲ್ಲಿ ವಿವರಿಸುತ್ತದೆ. ಇದು ಸಣ್ಣಕಥೆಯಲ್ಲಿ ಸಾಧ್ಯವಿಲ್ಲ. ಹಾಗಾಗಿ ಇವರೆಡೂ ಪ್ರಕಾರ ರಚನೆಯ ದೃಷ್ಟಿಯಿಂದ ಭಿನ್ನತೆ ಹೊಂದಿವೆ. "ಕಾದಂಬರಿಯ ಮುಖ್ಯ ಕಥಾ ವಸ್ತುವಿಗೆ ಸಮಾನಾಂತರವಾಗಿ ಇಲ್ಲವೆ ವೈದೃಶ್ಯವಾಗಿ ಉಪಕಥಾವಸ್ತು ಬೇಕಾಗುತ್ತದೆ. ಆದರೆ ಸಣ್ಣಕಥೆ ಈ ಗೊಡವೆಗೆ ಹೋಗದೆ ನೈತಿಕ ಸಾಕ್ಷಾತ್ಕಾರವನ್ನು ಒಂದು ಅನಿಸಿಕೆಯಂತೆ ತಟ್ಟನೆ ಮಿಂಚಿಸಿಬಿಡುತ್ತದೆ"[3] ಇದರ ಶಕ್ತಿ ಇರುವುದು ಅನಿಸಿಕೆಯ ತೀವ್ರತೆಯಲ್ಲಿ. ಅಭಿವ್ಯಕ್ತಿಯ ಸಂಕ್ಷಿಪ್ತತೆಯಲ್ಲಿ ಹೇಳಿ ಮುಗಿಸುತ್ತದೆ. "ಸಣ್ಣಕಥೆಯ ಪಾತ್ರಗಳು ಬದುಕಿನ ಬಲಿಪಶುಗಳು, ಅವಮಾನಿತರು, ನೊಂದವರು, ಹತಾಶರು ಮತ್ತು ಅನಾಥರು ಆಗಿರಬಹುದು ; ಆಗಿರುತ್ತಾರೆ"[4] ಕನ್ನಡ ಕಥಾ ಸಾಹಿತ್ಯದ ಮಟ್ಟಿಗಂತೂ ನಿಜ. ಉತ್ಸಾಹ, ಜೀವನ ಗೆಲ್ಲುವ ಛಲದ ಪಾತ್ರಗಳು ವಿರಳ ಎನ್ನಬಹುದು. ಕನ್ನಡದ ಅನೇಕ ಉತ್ತಮ ಕಥೆಗಳಲ್ಲಿ 'ಪಾಶವೀ ಪರಿಸರದ ಹಿಡಿತದಲ್ಲಿ ಸಿಕ್ಕಿ ಸೋತ ಮಾನವೀಯ ಆಶೋತ್ತರಗಳ ಕಲಾತ್ಮಕ ಚಿತ್ರಣ."[5] ಇರುವುದನ್ನು ಗಮನಿಸಬಹುದು.

ಸಣ್ಣಕಥೆಯೂ ಹೆಚ್ಚು ನಿರೂಪಣಾ ಶೈಲಿಯಿಂದ ಕೂಡಿದ್ದು, ಯಾವುದೇ ಅನುಭವದ ಕಂಡ ದೃಶ್ಯದ ಬಿಡಿ ಬಿಡಿ ಮುಖಗಳನ್ನು ಮಾತ್ರ ಹೇಳಲು ಸಾಧ್ಯ. ಜೀವನದ ವಿವಿಧ ಅನುಭವಗಳಾದ ಅಸಹಕಾರ, ಹಿಂಸೆ, ಬಂಧನ, ನೋವು, ಗೆಲುವು ಹೀಗೆ ಮೊದಲಾದ ಅಂಶಗಳನ್ನು ವಿಂಗಡಿಸಿ ಒಂದು ಬಾರಿಗೆ ಒಂದನಷ್ಟೇ ಹೇಳುತ್ತದೆ. ಹಾಗಾಗಿ ಸಣ್ಣ ಕಥೆಯನ್ನು ಪ್ರಕಾರವಾಗಿ ಆಯ್ದುಕೊಳ್ಳುವುದರಿಂದ, ಆತನ ಜೀವನದ ವಿಶಿಷ್ಟ ಆಯ್ಕೆ ಇದಾಗಿದೆ.

ಇಂತಹ ಸಣ್ಣಕಥೆಯು ಕನ್ನಡ ಸಾಹಿತ್ಯದಲ್ಲಿ ಹಲವಾರು ಹಂತಗಳಲ್ಲಿ ವ್ಯಕ್ತಿ ಮತ್ತು ಸಮಾಜಕ್ಕೂ ಅವಿನಾಭಾವ ಸಂಬಂಧವನ್ನು ಹೊಂದುತ್ತಾ ಸಾಗಿ ಬಂದಿರುವುದನ್ನು ಈ ಕೆಳಗಿನ ಹಂತಗಳಲ್ಲಿ ಗಮನಿಸಬಹುದು.

**ಸ್ವಾತಂತ್ರ್ಯಪೂರ್ವದ ಕಥಾ ಸಾಹಿತ್ಯ :-**

ಸ್ವಾತಂತ್ರ್ಯ ಪೂರ್ವದ ವಸಾಹತುಷಾಹಿ ಪ್ರಭುತ್ವದ ವಿರುದ್ಧ ತೀವ್ರವಾದ ವಿರೋಧದ ನಡುವೆ ಕನ್ನಡ ಸಾಹಿತ್ಯ ಸೃಷ್ಟಿಯಾಗತೊಡಗಿತು. ಇಪ್ಪತ್ತನೆಯ ಶತಮಾನದ ಆದಿಯಿಂದ ಸ್ವಾತಂತ್ರ್ಯ ಬರುವ ವರೆಗಿನ ಕಥಾ ಸಾಹಿತ್ಯ ಚಾರಿತ್ರಿಕ ಒತ್ತಡ, ಸಂಘರ್ಷಗಳ ಒತ್ತಡದಿಂದಲೇ ಸೃಷ್ಟಿಯಾಯಿತು. ಹಳಗನ್ನಡ ಸಾಹಿತ್ಯಕ್ಕೆ ತದ್ವಿರುದ್ಧವಾದ ಕಥಾ ಸಾಹಿತ್ಯ ಇದಲ್ಲ. ಹಾಗೆಯೇ ಕೇವಲ ಸ್ವಾತಂತ್ರ್ಯ ಆಪೇಕ್ಷೆಗೆ ಸೃಷ್ಟಿಯಾದ ನವೋದಯದ ಕಾವ್ಯಸಾಹಿತ್ಯವೂ ಅಲ್ಲ. "ಸ್ವಾತಂತ್ರ್ಯ ಪೂರ್ವ ಘಟ್ಟದ ಕಥಾಸಾಹಿತ್ಯ ಮುಖ್ಯವಾಗಿ ಮಾನವ ಮತ್ತು ಸಮಾಜ ಕೇಂದ್ರಿತವಾದದ್ದು. ಈ ಎರೆಡರ ಸಂಬಂಧಗಳ ವಾಸ್ತವ ವಿಶ್ಲೇಷಣೆ, ಆದರ್ಶ ಮಾನವನ ವ್ಯಕ್ತಿತ್ವದ ನಿರ್ಮಾಣ ಮತ್ತು ಮಾನವ ಸ್ವಭಾವದ ಮಜಲುಗಳ ಹುಡುಕಾಟವಾಗಿದೆ. ಈ ಶೋಧನೆ ಅಥವಾ ಅನ್ವೇಷಣೆಯೇ ಈ ಘಟ್ಟದ ಕಥಾ ಸಾಹಿತ್ಯದ ಮುಖ್ಯ ಕಾಳಜಿಯಾಗಿದೆ."[6] ಹಾಗಾಗಿ ನವೋದಯದ ಲೇಖಕರ ಮೇಲಿದ್ದ ಹೊರೆ ವ್ಯಕ್ತಿಯನ್ನು ಸಮಾಜಕ್ಕೆ

ಉಪಯುಕ್ತರನ್ನಾಗಿಸುವುದೇ ಆಗಿದೆ. ಜವಾಬ್ದಾರಿಗಳನ್ನು ಎಚ್ಚರಿಸುವುದೇ ಆಗಿತ್ತು. ಇದಕ್ಕೆ ಪೂರಕವೆಂಬಂತೆ ಕಥಾ ಸಾಹಿತ್ಯ ಬೆಳೆಯತೊಡಗಿತು.

ಬಿ.ಎಂ.ಶ್ರೀ ಅವರು ತಮ್ಮ ಭಾಷಣದಲ್ಲಿ "ಕಥಾಸಾಹಿತ್ಯವು ಬಹಳ ಪುರಾತನ ಕಾಲದಿಂದಲೂ ಇದೆ ಎಂದೂ, ಹದಿನಾರನೆಯ ಶತಮಾನದ ಹೊತ್ತಿಗೆ ಅದು ಒಂದು ನಿರ್ದಿಷ್ಟ ಸ್ವರೂಪವನ್ನು ಪಡೆಯಿತೆಂದೂ, ಸಣ್ಣಕಥೆ ಬರೆಯುವುದು ಬಹಳ ಕಷ್ಟದ ಕೆಲಸವೆಂದೂ, ಚಿನ್ನದ ಒಡವೆಗೆ ತೇಮಾನ ತೆಗೆದು ನಯಮಾಡಿದಂತೆ ಕುಸುರಿ ಕೆಲಸ ಮಾಡಬೇಕೆಂದೂ ಕಿರಿದರಲ್ಲಿ ಹಿರಿದಾದ ಭಾವ, ಜ್ಞಾನ, ಅನುಭವಗಳನ್ನು ತುಂಬಿ ಜೀವನಕ್ಕೆ ಬೆಳಕು ಬೀರುವುದು ಅದರ ವೈಶಿಷ್ಟ್ಯವೆಂದೂ, ಮೈಸೂರಿನಲ್ಲಿ ಶ್ರೀನಿವಾಸರು ಮೊಟ್ಟಮೊದಲು ಕತೆಗಳನ್ನು ಬರೆದು ಜನಕ್ಕೆ ಸವಿ ತೋರಿಸಿ ಮಾರ್ಗದರ್ಶಕರಾದರೆಂದು"[೭] ಅಭಿಪ್ರಾಯ ಪಟ್ಟಿದ್ದಾರೆ. ಎಲ್ಲವೂ ಸ್ಪಷ್ಟತೆಯಿಂದಲೇ ಕೂಡಿದ್ದು ಮಾಸ್ತಿಯವರನ್ನು ನೆನೆದದ್ದು ಸೂಕ್ತ. ಸಣ್ಣಕತೆ ಎಂದು ಮೊದಲ ಬಾರಿಗೆ ಬಳಸಿದವರು ಮಾಸ್ತಿ ವೆಂಕಟೇಶ ಐಯ್ಯಂಗಾರ್ ಅವರು. ಇವರ ಹಿಂದಿನ ಪಂಜೆ ಮಂಗೇಶರಾಯರ (೧೯೯೦) ಅವಧಿಯಲ್ಲಿ ಸಣ್ಣಕತೆಯನ್ನು ಚಿಕ್ಕಕತೆ ಎಂದು ಕರೆಯುತ್ತಿದ್ದರು.

ನವೋದಯ ಕಾಲದ ಪ್ರಮುಖ ಕಥೆಗಾರರಲ್ಲಿ ಕುವೆಂಪು, ಬೇಂದ್ರೆ, ಶಿವರಾಮ ಕಾರಂತ, ಆನಂದಕಂದ, ಎಂ.ವಿ. ಸೀತಾರಾಮಯ್ಯ ಅವರು ಪ್ರಮುಖರು. ಇವರೆಲ್ಲರೂ ಮಾಸ್ತಿಯವರ ಸಮಕಾಲೀನರೇ ಆಗಿದ್ದಾರೆ. ಇವರು ಬೇಡ ಸಮಾಜದ ಎಲ್ಲ ಸ್ತರದ ಜನರ ಬದುಕನ್ನು ಆಧರಿಸಿ ಕತೆಗಳನ್ನು ಬರೆದರು. ಈ ಕತೆಗಾರರಿಗೆಲ್ಲ ಗಾಂಧೀಜಿ, ಅರವಿಂದ, ಪರಮಹಂಸ, ವಿವೇಕಾನಂದ, ನ್ಯೂಟನ್, ಡಾರ್ವಿನ್ ತತ್ವಶಾಸ್ತ್ರ ಮತ್ತು ಮಾನವತಾವಾದದ ಪ್ರಭಾವ ಬೀರಿತು. ಅಹಿಂಸೆಯೇ ಮಾನವಧರ್ಮ ಎಂಬ ಆದರ್ಶವನ್ನು ಇವರ ಕಥೆಗಳಲ್ಲಿ ಕಾಣುತ್ತೇವೆ.

ಪ್ರಮುಖವಾಗಿ ಮಾಸ್ತಿಯವರ 'ರಂಗನ ಮದುವೆ' ಮೊದಲ ಕತೆ. ಇದು ೧೯೧೧ ರಲ್ಲಿ ಪತ್ರಿಕೆಗಳಲ್ಲಿ ಪಕಟಗೊಂಡು ಹೆಸರುಮಾಡಿತ್ತು. ಇವರ ಕಥೆಗಳಲ್ಲಿ ಕಲಾತ್ಮಕತೆ, ಆಳವಾದ ಜೀವನಾನುಭವ ಮತ್ತು ಸಾಮಾಜಿಕ ಪ್ರಜ್ಞೆಯೇ ಜೀವಾಳ, ಹೆಚ್ಚು ನಿರೂಪಣಾ ಶೈಲಿ ಕಂಡುಬರುತ್ತದೆ. ಮಾಸ್ತಿ ನಂತರ ಎಂ.ಆರ್. ಕೃಷ್ಣಶಾಸ್ತ್ರಿಗಳು, ಕೊರಡ್ಕಲ್ ಶ್ರೀನಿವಾಸರು ಸಮಕಾಲೀನ ಹಂತದಲ್ಲೆ ಕತೆಗಳನ್ನು ಬರೆದವರು. ಇವರ ಕತೆಗಳು ಹಿಂದೂ ಸಂಸ್ಕೃತಿಯ ಮೌಲ್ಯಗಳ ಚೌಕಟ್ಟಿನೊಳಗೆ ರೂಪುಗೊಂಡವು. ಆನಂದರೂ ಸಹ ಮಾಸ್ತಿ ಪ್ರಭಾವದಲ್ಲೇ ಬೆಳೆದವರು. ಇವರ ಕಥೆಗಳು ಸಂಸಾರಿಕವಾದವು, ಗಂಡ-ಹೆಂಡತಿಯರ ಬಾಂಧವ್ಯ ಕುರಿತು ಕುಟುಂಬದ ಮಹತ್ವ ತಿಳಿಸುತ್ತಿದ್ದವು. ಮಾಸ್ತಿ ನಂತರದ ತಲೆಮಾರಿನ ನವೋದಯ ಕತೆಗಾರರೆಂದರೆ ರಂ.ಶ್ರೀ. ಮುಗುಳಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಪು.ತಿ. ನರಸಿಂಹಚಾರ್, ಶ್ರೀರಂಗರು ಪ್ರಮುಖವಾದವರು. ಸ್ತ್ರೀ ಲೇಖಕಿಯರಲ್ಲಿ ಆರ್. ಕಲ್ಯಾಣಮ್ಮ, ಸರಸ್ವತಿ ಭಾಯಿ ರಾಜವಾಡೆ, ಇವರು ಸ್ತ್ರೀಯರ ತ್ಯಾಗ, ಆದರ್ಶ, ನೋವು - ಇವು ಅವರ

ಕಥಾ ವಸ್ತು. ನವೋದಯದ ನಂತರದ ದಿನಗಳಲ್ಲೂ ಈ ಮಾರ್ಗದಲ್ಲಿ ನಡೆದ ತ್ರಿವೇಣಿ, ಕೊಡಗಿನ ಗೌರಮ್ಮ, ತಮ್ಮ ಸಣ್ಣಕತೆಗಳಲ್ಲಿ ಹೆಣ್ಣಿನ ಮನಸ್ಸಿನ ತುಮುಲಗಳನ್ನು ಚಿತ್ರಿಸಿದ್ದಾರೆ. ತ್ರಿವೇಣಿ ಅವರು ಮನೋವೈಜ್ಞಾನಿಕ ದೃಷ್ಟಿಕೋನದಿಂದ ಹೆಣ್ಣಿನ ನಡವಳಿಕೆ ಹಾಗೂ ಹೆಣ್ಣು ಹೆಣ್ಣಿಗೆ ಒಳಿತಿಲ್ಲ ಎಂಬುದನ್ನು ಕತೆ ರೂಪದಲ್ಲಿ ತೆರೆದಿಟ್ಟಿದ್ದಾರೆ. ಇವರ ಹಾದಿಯಲ್ಲೆ ಎಮ್.ಕೆ ಇಂದಿರಾ, ವಾಣಿ, ಶಾಂತಾದೇವಿ ಕಣವಿ ಇನ್ನೂ ಮುಂತಾದವರು ಸಾಗಿ ಬಂದು ಕಥಾ ಪರಂಪರೆಯನ್ನು ಬೆಳೆಸಿದರು.

ಪ್ರಗತಿಶೀಲ ಪಂಥ ನವೋದಯದ ಆದರ್ಶ, ಅಹಿಂಸೆಯನ್ನು ತ್ಯಜಿಸಿ, ದುರ್ಬಲರ, ಶೋಷಿತರ ಜೀವನವನ್ನು ಕತೆಗಳಲ್ಲಿ ತರುವ ಪ್ರಯತ್ನ ಮಾಡಿದರು. ಸಮೂಹ ಹೋರಾಟಕ್ಕೆ ಪೂರಕವಾದ ಕತೆಗಳೇ ಹೆಚ್ಚು ರಚನೆಗೊಂಡವು. ಮರ್ಕ್ಸ್ ವಾದವೇ ಬೆನ್ನೆಲುಬಾಗಿ ಪ್ರಗತಿಶೀಲ ಪಂಥ ಹುಟ್ಟಿಕೊಂಡಿತಾದರೂ ಯಶಸ್ವಿಯಾಗಲಿಲ್ಲ. ಪ್ರಗತಿಶೀಲ ಚಳುವಳಿಯ ಮುಂದಾಳತ್ವವನ್ನು ಅ.ನ.ಕೃಷ್ಣರಾರರು ವಹಿಸಿಕೊಂಡರು. ಇವರು ಕಾದಂಬರಿಕಾರರಾಗಿ ಹಾಗೂ 'ಮಿಂಚು' ಎಂಬ ಕಥಾ ಸಂಕಲನ ಕೂಡ ಪ್ರಕಟಿಸಿದ್ದಾರೆ. ಕಾದಂಬರಿಯೇ ಇವರ ಪ್ರಮುಖ ಸೃಜನಶೀಲ ಮಾಧ್ಯಮವಾಯಿತಾದರೂ ವಸ್ತು, ತಂತ್ರದ ದೃಷ್ಟಿಯಿಂದ ಪ್ರಮುಖವೆನಿಸುವ ಕತೆಗಳನ್ನು ಬರೆದರು. ತಾ.ರಾ. ಸುಬ್ಬರಾಯರು, ಬಸವರಾಜ ಕಟ್ಟಿಮನಿ, ನಿರಂಜನರು, ಉಳಿದ ಪ್ರಮುಖ ಕತೆಗಾರರು, ವಾಸ್ತವ ಬದುಕಿನ ಹೀನ ಕೃತ್ಯಗಳನ್ನು ಬಡತನ, ಶೋಷಣೆಯನ್ನು ಕತೆಗಳ ಮೂಲಕ ಪ್ರತಿಭಟಿಸಿದ್ದಾರೆ. ನಿರಂಜನರ ಕೊನೆಯ ಗಿರಾಕಿ ಕತೆ ಅತ್ಯಂತ ಪ್ರಭಾವ ಬೀರುವ ಕತೆಯಾಗಿದೆ. ಹೀಗಾಗಿ ಹೆಚ್ಚು ವೈಚಾರಿಕತೆಯಿಂದ ಇಲ್ಲಿನ ಕತೆಗಳು ಕಂಡುಬಂದರೂ ಪರಿಹಾರವೇನೂ ತಿಳಿಸದೇ ಹೋದದ್ದು ಈ ಪಂಥದ ಹಿನ್ನೆಡೆಯಾಗಿ ಕಂಡುಬರುತ್ತದೆ.

ನಂತರ ಬಂದಂತಹ ನವ್ಯ ಸಾಹಿತ್ಯ ನವೋದಯ ಮತ್ತು ಪ್ರಗತಿಶೀಲ ಪಂಥಗಳ ಹಾಗೆ ಸಾಮಾಜಿಕ ಸಮಸ್ಯೆಗಳು, ವ್ಯಕ್ತಿ ಮತ್ತು ಸಮಾಜದ ವೈರುಧ್ಯಗಳನ್ನು, ಬಡವರ, ಶೋಷಿತರ ಹೋರಾಟಕ್ಕೆ ಹೆಚ್ಚು ಒತ್ತು ಸಿಕ್ಕಿತಾದರೂ ನವ್ಯದವರು ವ್ಯಕ್ತಿಯ ಆಂತರಿಕ ಸಮಸ್ಯೆಗಳಿಗೆ ಸ್ಪಂದಿಸಿದರು. ದೈಹಿಕಕ್ಕಿಂತ ಮಾನಸಿಕ ಸಮಸ್ಯೆಯ ಕಡೆ ಹೆಚ್ಚು ಗಮನ ಕೊಟ್ಟರು. ಈ ಕಾರಣದಿಂದಲೇ ನವ್ಯ ಸಾಹಿತ್ಯದ ಸ್ವರೂಪ ಮನೋವೈಜ್ಞಾನಿಕದ ಕಡೆ ವಾಲಿತು. ಸ್ವಾತಂತ್ರ್ಯದ ನಂತರದ ಸಮಸ್ಯೆಗಳಾದ ಕೌಟುಂಬಿಕ ಸಮಸ್ಯೆ, ಪಾಶ್ಚಾತ್ಯ ಪ್ರಭಾವ, ವಾಸ್ತವದ ಚಿತ್ರಣ, ನಿರುದ್ಯೋಗ ಸಮಸ್ಯೆ, ಮಾನವನ ಆಂತರಿಕ ಆಸೆಗಳು, ಅಂತರಂಗ – ಬಹಿರಂಗಗಳ ತೆರೆದ ಮುಖ, ಹೀಗೆ ಸಣ್ಣಕಥೆಗೆ ವಸ್ತು ವೈವಿಧ್ಯತೆಯಿಂದ ಅದರ ವಿಸ್ತೀರ್ಣ ದೊಡ್ಡದಾಯಿತು. ಪ್ರೇಮ – ಕಾಮದ ನಡುವಿನ ನಿಗೂಢತೆಯೇ ಇದರ ಕತೆಗಳ ಸ್ಥಾಯಿಭಾವ. ಉತ್ತಮ ನಿರೂಪಣೆಯಿಂದ ಆರಂಭವಾಗುವ ಕತೆಗಳು ಪರಿಣಾಮಕಾರಿಯಾದ ಅಂತ್ಯ, ಕುತೂಹಲವೇ ಇದರ ಕತೆಗಳ ಲಕ್ಷಣ. ಫ್ರಾಯ್ಡ್ ಯೂಂಗ್‌ರ ಪ್ರಭಾವಕ್ಕೆ ಒಳಗಾದ ಪ್ರಮುಖ ನವ್ಯಕತೆಗಾರರೆಂದರೆ, ಯು.ಆರ್. ಅನಂತಮೂರ್ತಿ, ಯಶವಂತ ಚಿತ್ತಾಲ,

ಶಾಂತಿನಾಥ ದೇಸಾಯಿ, ಪಿ.ಲಂಕೇಶ್, ಬಿ.ಸಿ. ರಮಚಂದ್ರ ಶರ್ಮ, ಪೂರ್ಣಚಂದ್ರ ತೇಜಸ್ವಿ, ದೇವನೂರು ಮಹಾದೇವ, ಪ್ರಮುಖರು.

ಪ್ರಮುಖವಾಗಿ ನವ್ಯಲೇಖಕರೆಲ್ಲರೂ ಮನುಷ್ಯನ ಮನಸ್ಸಿನ ಜಾಗೃತ ಹಾಗೂ ಸುಪ್ತಸ್ಥರಗಳಿದ್ದು, ಸುಪ್ತ ಚಿತ್ತದಲ್ಲಿ ನಮಗೆ ಅಪ್ರಿಯವಾದ ಆಶೆ, ಅನುಭವಗಳೆಷ್ಟೋ ಮುಳ್ಳಿನಂತೆ ಚುಚ್ಚಿಕೊಂಡಿದೆ ಎಂಬುದನ್ನು ಇವರು ತೆರೆದು ತೋರಿಸಿದರು. ಅಂತಮಮೂರ್ತಿಯವರ 'ಕಾರ್ತಿಕ', ಘಟಶ್ರಾದ್ಧ ಗಳಲ್ಲಿ ಮಾನಸಿಕ ತೊಳಲಾಟವಿದೆ. ಚಿತ್ತಾಲರ 'ಕತೆಯಾದಳು ಹುಡುಗಿ', 'ಸಿದ್ಧಾರ್ಥ' ಗಳಲ್ಲಿ ಮನೋವಿಶ್ಲೇಷಣೆ, ಸಂಕೇತಗಳ ಸಮರ್ಥ ಪ್ರಯೋಗವಿದೆ. ಮರಾಠಿಯಿಂದ ಸ್ಫೂರ್ತಿ ಪಡೆದ ದೇಸಾಯಿಯವರ 'ಮಂಜುಗೆಡ್ಡೆ', 'ಕ್ಷಿತಿಜ', ಗಳಲ್ಲಿ ಕಾಮ ಮತ್ತು ಮೂಲಭೂತ ಅವಶ್ಯಕತೆಗಳೇ ಕತೆಯಾಗಿವೆ. ಪಿ. ಲಂಕೇಶ್ 'ರೊಟ್ಟಿ', 'ನಿವೃತ್ತರು' ಕಥಾಸಂಕಲನಗಳಲ್ಲಿ ಮನುಷ್ಯನ ಸಣ್ಣತನ, ದುಷ್ಟ ನಡವಳಿಕೆಗಳನ್ನು ತೆರೆದು ತೋರಿಸಿದ್ದಾರೆ. ಬಿ.ಸಿ. ರಾಮಚಂದ್ರ ಶರ್ಮ ಹಟದಿಂದಲೇ ನವ್ಯತೆಯನ್ನು ಕನ್ನಡಕ್ಕೆ ತಂದವರು. 'ಸೆರಗಿನ ಕೆಂಡ', 'ನಗು' ಉತ್ತಮ ನವ್ಯಕತೆಗಳನ್ನು ತಮ್ಮ ತಂತ್ರ, ಭಾಷಾ ಶೈಲಿಯ ಮೂಲಕ ನೀಡಿದ್ದಾರೆ.

ಜಿ.ಎಸ್. ಸದಾಶಿವ ಅವರು ಮತ್ತೊಬ್ಬ ಪ್ರಮುಖ ನವ್ಯ ಕಥೆಗಾರ. ಇವರು ಕಥೆಗಳಲ್ಲಿ ಮನುಷ್ಯನ ಸಾಚಾ ಮೌಲ್ಯಗಳನ್ನು ಶೋಧಿಸುವ ಪ್ರಯತ್ನ ಮಾಡಿದ್ದಾರೆ. ನವ್ಯ ಮಾರ್ಗದಲ್ಲೆ ಬಂದರೂ ಸಹ ಭಿನ್ನ ಮಾರ್ಗದಲ್ಲಿ ನಡೆದ ಪೂರ್ಣಚಂದ್ರ ತೇಜಸ್ವಿ, ತಂದೆಯ ಹಾಗೆ ಪ್ರಕೃತಿಯ ಕೂಸು, ಇವರ 'ಅಬಚೂರಿನ ಪೋಸ್ಟಾಫೀಸು', 'ತಬರನ ಕಥೆ', 'ಹುಲಿಯೂರಿನ ಸಹರದ್ದು' ಮುಂತಾದ ಉತ್ತಮ ಕತೆಗಳನ್ನು ನೀಡಿದ್ದಾರೆ.

ಉಳಿದ ನವ್ಯ ತಲೆಮಾರಿನ ಲೇಖಕರು ಎಂದರೆ ಸುಮತೀಂದ್ರ ನಾಡಿಗ, ಗಿರಿಡ್ಡಿ ಗೋವಿಂದರಜು, ಟಿ.ಜಿ. ರಾಘವ, ಮುಂದಿನ ಕಿರಿಯ ತಲೆಮಾರಿನವರಲ್ಲಿ ಶ್ರೀ ಕೃಷ್ಣ ಆಲನಹಳ್ಳಿ, ರಾಘವೇಂದ್ರ ಖಾಸನೀಸ, ರಾಜಶೇಖರ ನೀರಮಾನ್ವಿ, ರಾಮಚಂದ್ರದೇವ ಮುಂತಾದವರು ಹಳ್ಳಿ ಹಾಗೂ ನಗರಗಳ ನಡುವೆ ಸಿಲುಕಿದ ವ್ಯಕ್ತಿಗಳ ಮಾನಸಿಕ ತೊಳಲಾಟವನ್ನು ತಮ್ಮ ತಮ್ಮ ಕತೆಗಳಲ್ಲಿ ತಂದಿದ್ದಾರೆ.

ಹೀಗೆ ಬೆಳೆದು ಬಂದ ನವ್ಯ ಸಣ್ಣಕತೆಗಳ ಮತ್ತೊಂದು ವೈಶಿಷ್ಟ್ಯವೆಂದರೆ ಮಹಿಳೆಯರ ಲೋಕದ ಅನುಭವಗಳು ಮಹಿಳೆಯರಿಂದಲೇ ಕತೆಗಳಲ್ಲಿ ರೂಪ ಪಡೆದಿದ್ದು, ಪುರುಷರು ಎಷ್ಟೇ ಬರೆದರೂ ಸಹಜ ಅನುಭವ ದೂರದ ಮಾತೇ. ಈ ಕಾಲಕ್ಕೆ ಮಹಿಳೆಯರು ಬರೆಯ ತೊಡಗಿದ ಮೇಲೆ ಅವರ ಸುಖ – ದುಃಖ, ನೋವು – ನಲಿವು, ತಾಜಾತನದ ಅನುಭವವನ್ನು ಜೀವಂತವಗಿ ಹಿಡಿದು ಕತೆಯಾಗಿಸುವ ಪ್ರಯತ್ನ ಮಾಡಿದರು.

ನವ್ಯದ ನಂತರ ಬಂದ ದಲಿತ ಬಂಡಾಯದ ಲೇಖಕರು ಸಣ್ಣಕಥಾ ಪ್ರಕಾರವನ್ನು ತುಂಬಾ ಶಕ್ತಿಯುತವಾಗಿ ಬೆಳೆಸಿದರು. ಇಲ್ಲಿನ ಕಥೆಗಳಲ್ಲಿ ಸ್ವಂತ ಅನುಭವ ಮತ್ತು ಲೋಕದ ಅನುಭವಗಳೆರೆಡೂ ಕಥೆಗಳಲ್ಲಿ ಅಭಿವ್ಯಕ್ತಗೊಂಡಿದೆ.

ಪ್ರಮುಖವಾಗಿ ಸಮಾಜದೊಳಗಿನ ಲಿಂಗಭೇದ, ಜಾತಿಭೇದ, ಅಸ್ಪೃಶ್ಯತೆಯ ವಿರುದ್ಧ ಹೋರಾಡುವುದಾಗಿದೆ. ಆರ್ಥಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಶೋಷಣೆಗೆ ಒಳಗಾದವರ ಪರವಾಗಿದ್ದವರು, ಅವರ ಬದುಕನ್ನು ಸಾಹಿತ್ಯದಲ್ಲಿ ತೆರೆದಿಡುವ, ಶೋಷಿತ ವರ್ಗವನ್ನು ಪ್ರಶ್ನಿಸುವ ಕಥೆಗಳು, ಕಾವ್ಯಗಳು, ಕಾದಂಬರಿಗಳನ್ನು ಬರೆದರು. ಪ್ರಮುಖ ಕಥೆಗಳೆಂದರೆ ಕುವೆಂಪು ಅವರ 'ಸಾಲದ ಮಗು', ಕೊರಡ್ಕಲ್ ಶ್ರೀನಿವಾಸರಾಯರ 'ದನಿಯರ ಸತ್ಯನಾರಾಯಣ', ಭಾರತೀಪ್ರಿಯರ 'ಮೋಚಿ', ವಾಸ್ತಿಯವರ 'ವೆಂಕಟಿಗನ ಹೆಂಡತಿ', ಬಸವರಾಜ ಕಟ್ಟೀಮನಿಯವರ 'ಜೀವನ ಕಲೆ', ನಂತರ ನವ್ಯದಿಂದ ಬಿಡಿಸಿಕೊಂಡ ಪೂರ್ಣಚಂದ್ರ ತೇಜಸ್ವಿಯವರೂ ಕೂಡ ಜಲಿತ ಲೇಖಕರೊಡನೆ ದನಿಗೂಡಿಸಿದರು. ದೇವನೂರು ಮಹದೇವ ಅವರು ಮೇಲ್ವರ್ಗದವರ ನಡವಳಿಕೆ ಶೋಷಣೆಯ ರೀತಿ ನೀತಿಗಳನ್ನು ತಮ್ಮ ಕಥೆಗಳಲ್ಲಿ ಚಿತ್ರಿಸಿದರು. ಪ್ರಮುಖವಾಗಿ ಹಸಿವು, ಲೈಂಗಿಕತೆ, ಬಡತನ ಒಂದಕ್ಕೊಂದು ಎಂಬಂತೆ ಹೇಗೆ ಪೂರಕವಾಗಿ ಶೋಷಣೆಗೆ ಕಾರಣ ಎಂಬ ಅಂಶಗಳು ಇಲ್ಲಿನ ಕಥೆಗಳಲ್ಲಿ ಕಂಡುಬರುತ್ತವೆ.

ನಂತರದ ಕಾಲವೇ ನವ್ಯೋತ್ತರದ ಕಾಲ. ಕಳೆದ ೨೫ ವರ್ಷಗಳಿಂದ ಸಾಹಿತ್ಯ ವಿಪುಲವಾಗಿ ಬೆಳೆದಿದೆ. ಕಥಾಸಾಹಿತ್ಯವೂ ಜೊತೆಜೊತೆಯಲ್ಲಿಯೇ ಪಮುಖ ಪ್ರಕಾರವಾಗಿಯೇ ಇಂದು ಕಾಣುತ್ತದೆ. ಇತ್ತೀಚಿನ ದಿನಗಳಲ್ಲಿ ಮುಸ್ಲಿಂ ಲೇಖಕರು, ಲೇಖಕಿಯರು ಬರೆದಿರುವ ಸಾಹಿತ್ಯವೂ ಸಹ ಗಮನ ಸೆಳೆಯುತ್ತವೆ. ಇದರಿಂದಾಗಿ ಕಥಾ ಸಾಹಿತ್ಯದ ಆಳ ಅಗಲ ಹೆಚ್ಚಾಗಿದೆ ಎಂದೇ ಹೇಳಬಹುದು. "ಮುಸ್ಲಿಂ ಲೇಖಕರು ತಮ್ಮ ವಿಶಿಷ್ಟವಾದ ಅನುಭವ ಹಾಗೂ ಗದ್ಯದ ಮೂಲಕ ಕನ್ನಡ ಕಥಾಸಾಹಿತ್ಯಕ್ಕೆ ತಮ್ಮದೇ ಆದ ವಿಶಿಷ್ಟ ಅರ್ಥವನ್ನು ಸೇರಿಸಿದ್ದಾರೆ. ಇವರಲ್ಲಿ ಮುಖ್ಯವಾಗಿ ಸಾರಾ ಅಬೂಬಕರ್, ಬೋಳುವಾರು ಮಹಮದ್ ಕುಂಞ, ಫಕೀರ್ ಮಹಮದ್ ಕಟ್ಪಾಡಿ, ಅಬ್ದುಲ್ ರಶೀದ್, ಬಾನು ಮಸ್ತಾಕ್, ಮುಂತಾದ ಕತೆಗಾರ / ಕತೆಗಾರ್ತಿಯರು ಮುಸ್ಲಿಂ ಸಮುದಾಯದ ಸಂಪ್ರದಾಯ, ಆಚರಣೆ, ಧರ್ಮ, ಮುಗ್ಧತೆ, ದ್ವೇಷ, ಕ್ರೌರ್ಯ ಹಾಗೂ ಸ್ತ್ರೀ ಲೋಕದ ಬಗೆಗಿನ ನಿಷಿದ್ಧತೆ ಇತ್ಯಾದಿಗಳನ್ನು ತಮ್ಮ ಕಥೆಗಳ ಮೂಲಕ ತೆರೆದಿಟ್ಟಿದ್ದಾರೆ"[೮] 'ಧರ್ಮದ ಬೆಲೆ ಬೀಸಿದಾಗ', 'ಮಸೀದಿ ಕಟ್ಟುವರು' ಕಥೆಗಳಲ್ಲಿ ಮಸೀದಿಯು ಪ್ರತಿಪಾದಿಸುವ ಪ್ರತಿಗಾಮಿ ಆಶಯಗಳನ್ನು ಸಾರಾ ಅಬೂಬಕ್ಕರ್ ತಿರಸ್ಕರಿಸುವ ಮನೋಭಾವವನ್ನು ವ್ಯಕ್ತಪಡಿಸಿದ್ದಾರೆ.

ಹೀಗೆ ಎಲ್ಲಾ ಪಂಥಗಳಲ್ಲೂ ಅಲ್ಲೊಬ್ಬರು ಇಲ್ಲೊಬ್ಬರು ಲೇಖಕಿಯರು ಕಥೆ, ಕಾದಂಬರಿಗಳನ್ನು ಬರೆಯತೊಡಗಿದರು. ನವೋದಯದ ತಿರುಮಲಾಂಬಾ, ಸರಸ್ವತಿಬಾಯಿ ರಾಜವಾಡೆ, ಲೇಖಕಿಯರಿಂದ ಹಿಡಿದು ಕೊಡಗಿನ ಗೌರಮ್ಮ, ತ್ರಿವೇಣಿ ಮುಂತಾದವರನ್ನು ದಾಟಿಕೊಂಡು ಇಂದಿನ ವೀಣಾ ಶಾಂತೇಶ್ವರ, ವೈದೇಹಿ, ನೇಮಿಚಂದ್ರ, ಇನ್ನೂ ಮುಂತಾದ ಕಥೆಗಾರ್ತಿಯರು ಸಾಹಿತ್ಯದಲ್ಲಿ ತೊಡಗಿಸಿಕೊಂಡಿದ್ದಾರೆ. ಇರುವ ವಾಸ್ತವವನ್ನು ಚರ್ಚಿಸುವಂತೆ ಇದ್ದ ನವೋದಯ

ಲೇಖಕಿಯರಿಗೂ, ಶೋಷಣೆಗೆ ಒಳಗಾದೆವು ಎಂಬ ಅರಿವು ಪಡೆದ ಮೇಲೆ ಸಮಾನತೆಗಾಗಿ, ರಾಜಕೀಯ ಸ್ವಾತಂತ್ರ್ಯ ಬಯಸುತ್ತಿರುವುದು ಇಂದಿನ ಪರಿಸ್ಥಿತಿಗೆ ಅವಶ್ಯಕವೆನಿಸಿದೆ.

ಹೀಗೆ ಸಾಲು ಸಾಲಾಗಿ ಕನ್ನಡದಲ್ಲಿ ಸಣ್ಣಕಥೆಗಳು ರೂಪು ಪಡೆದವು. ಪ್ರಮುಖವಾಗಿ ಹನೂರರು ಕತೆ, ಕಾದಂಬರಿ ಬರೆಯುವ ಕಾಲಕ್ಕೆ ಕತೆಗಳಲ್ಲಿ ವರ್ಗ ಸಮಸ್ಯೆ, ಜಾತಿ ಪದ್ಧತಿ, ಲಿಂಗಬೇಧನೀತಿ, ಶೋಷಣೆ, ಭಾಷಾ ಸಮಸ್ಯೆ, ಲೋಹಿಯಾ ಹಾಗೂ ಅಂಬೇಡ್ಕರರ ವಿಚಾರಧಾರೆಗಳು ಈ ನವ್ಯೋತ್ತರದ ಕತೆಗಾರರಿಗೆ ಪ್ರಬಲವಾಗಿ ಪ್ರಭಾವಿಸಿದವು. ಬಂಡಾಯದ ಕತೆಗಾರರಿಗೆ ಒತ್ತಾಸೆ ನೀಡಿತು. ಕುಂ. ವೀರಭದ್ರಪ್ಪ, ಚಂದ್ರಶೇಖರ ಪಾಟೀಲ, ಕಾಳೇಗೌಡ ನಾಗವಾರ, ಬರಗೂರು ರಾಮಚಂದ್ರಪ್ಪ, ಅರವಿಂದ ಮಾಲಗಿತ್ತಿ, ಗೀತಾ ನಾಗಭೂಷಣ್, ಬೊಳುವಾರ ಮಹಮದ್, ಅಬ್ದುಲ್ ರಶೀದ್, ಭಾನು ಮಸ್ತಾಕ್, ಲಲಿತಾನಾಯಕ್, ಮೊಗಳ್ಳಿ ಗಣೇಶ್ ಮುಂತಾದ ಬಂಡಾಯ ಕಥೆಗಾರರಲ್ಲಿ ಸಾಮಾಜಿಕ ಅನುಭವದ ಕತೆಗಳೇ ಹೆಚ್ಚು. ಅಸಮಾನತೆ, ಅಸ್ಪೃಶ್ಯತೆಯ ವಿರುದ್ಧ, ಸಾಮಾಜಿಕ ಜಾಗೃತಿಯನ್ನು ಮೂಡಿಸಿದ ಅನೇಕ ಲೇಖಕರು ಯಾವ ಪಂಥಕ್ಕೂ ಗುರುತಿಸಿಕೊಳ್ಳದೆ ಬಂದಿರುವುದನ್ನು ಗುರುತಿಸಬಹುದು. ಮುಖ್ಯವಾಗಿ ಜಯಂತ್ ಕಾಯ್ಕಿಣಿ, ಕೃಷ್ಣಮೂರ್ತಿ ಹನೂರು, ವಿವೇಕ ಶಾನಭಾಗ, ರಾಘವೇಂದ್ರ ಪಾಟೀಲ, ನೇಮಿಚಂದ್ರ, ಎಂ.ಎಸ್.ವೇದ ಮುಂತಾದ ಕತೆಗಾರರು ತಮ್ಮ ಕತೆಗಳಲ್ಲಿ ವಾಸ್ತವದ ಬದಲಾವಣೆ, ಸೌಜನ್ಯದ ದುರುಪಯೋಗ, ಆಧುನಿಕ ಸಮಾಜದ ನ್ಯೂನತೆಗಳನ್ನು ಬರೆಯುತ್ತಲೇ ಇದ್ದಾರೆ. ಹಿಂದಿನ ಹಿರಿಯ ಕವಿಗಳೊಡನೆ ಹೆಜ್ಜೆ ಹಾಕದೆ ಹೊಸ ಬದಲಾವಣೆಗಳನ್ನು ತರುವುದರ ಮೂಲಕ ಕತೆಗಳನ್ನು ವಿಭಿನ್ನವಾಗಿಸುತ್ತಿದ್ದಾರೆ.

ಒಟ್ಟಾರೆಯಾಗಿ ಕನ್ನಡ ಕಥಾ ಪರಂಪರೆ ಹೊಸ ವಿಚಾರಗಳ, ಹೊಸ ಸಮಸ್ಯೆಗಳನ್ನು ನಿರೂಪಗೊಳಿಸುತ್ತಾ ಉತ್ತಮ ಕಥೆಗಳನ್ನು ನೀಡುತ್ತಿದೆ. ಕಾದಂಬರಿ ಪ್ರಕಾರವನ್ನು ಹಿಂದಕ್ಕಿ ಇಂದು ಕಥಾ ಪ್ರಕಾರ ಬೆಳೆಯುತ್ತಿರುವುದು ಸಂತೋಷದ ಸಂಗತಿಯಾಗಿದೆ.

**ಅಡಿಟಿಪ್ಪಣಿ :-**

೧ : ಎಸ್.ಪ್ರಸಾದಸ್ವಾಮಿ : ಕಥೆ ಕಥನ : ಪು : ೧

೨ : ಉದೃತ : ಎಸ್.ಪ್ರಸಾದಸ್ವಾಮಿ : ಕಥೆ ಕಥನ : ಪು : ೨

೩ : ಅದೇ : ಪು : ೩

೪ : ಅದೇ : ಪು : ೩

೫ : ಅದೇ : ಪು : ೩

೬ : ಕರೀಗೌಡ ಬೀಚನಹಳ್ಳಿ : ಶತಮಾನದ ಸಣ್ಣಕಥೆಗಳ ಸಮೀಕ್ಷೆ : ಪು : ೧೨

೭ : ಕನ್ನಡನುಡಿ : ಸಂಪುಟ – ೨ : ಸಂಚಿಕೆ – ೧೪ : ಪುಟ : ೧೭

೮ : ಕರೀಗೌಡ ಬೀಚನಹಳ್ಳಿ : ಶತಮಾನದ ಸಣ್ಣಕಥೆಗಳ ಸಮೀಕ್ಷೆ : ಪು : ೧೪೩

ಅಧ್ಯಾಯ – ೩

# ಕೃಷ್ಣಮೂರ್ತಿ ಹನೂರು : ಜೀವನ ಮತ್ತು ವ್ಯಕ್ತಿತ್ವ

ಕನ್ನಡ ನವ್ಯೋತ್ತರ ಸಾಹಿತ್ಯದಲ್ಲಿ ಡಾ. ಕೃಷ್ಣಮೂರ್ತಿ ಹನೂರು ಅವರು ಉತ್ತಮ ಕಥೆ, ಕಾದಂಬರಿಕಾರರಾಗಿದ್ದಾರೆ. ಅಲ್ಲದೆ ಜಾನಪದ ಕ್ಷೇತ್ರದಲ್ಲಿ ದುಡಿದ ಮಹನೀಯರಲ್ಲಿ ಇವರಿಗೂ ಮಹತ್ವದ ಸ್ಥಾನವಿದೆ. ಇವರಿಂದ ಮೂರು ಕಥಾ ಸಂಕಲನಗಳು, ಎರಡು ಕಾದಂಬರಿಗಳು ಸೃಜನಶೀಲತೆಯಿಂದ ರಚಿಸಲ್ಪಟ್ಟಿವೆ. ಅಲ್ಲದೆ ಜಾನಪದ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಕಥೆಗಳು, ವೀರಗೀತೆಗಳು, ವಿಮರ್ಶೆ, ಸಂಶೋಧನೆ ಮತ್ತು ಸಂಪಾದನೆಯನ್ನು ಮಾಡುವ ಮೂಲಕ ಉತ್ತಮ ಸಾಹಿತ್ಯ ಚಟುವಟಿಕೆಯಲ್ಲಿ ತೊಡಗಿಸಿಕೊಂಡವರು. ಅಧ್ಯಾಪಕರಾಗಿ, ಸಾಕಷ್ಟು ಅನುಭವವಿರುವ ಹನೂರರು ಪ್ರಸ್ತುತ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಉತ್ತಮ ಸಂಶೋಧನಾ ಪ್ರಬಂಧಗಳಿಗೆ ಮಾರ್ಗದರ್ಶಕರಾಗಿಯೂ ಯಶಸ್ವಿಯಾಗಿದ್ದಾರೆ. ಹನೂರರ ಮ್ಯಾಸಬೇಡರು (ಚಿತ್ರದುರ್ಗ ಜಿಲ್ಲೆಯ ಮ್ಯಾಸಬೇಡನಾಯಕ ಬುಡಕಟ್ಟು ಜೀವನ ಮತ್ತು ಸಂಸ್ಕೃತಿ ಅಧ್ಯಯನ) ಎಂಬ ಸಂಶೋಧನಾ ಪ್ರಬಂಧ "ಬುಡಕಟ್ಟು ಸಂಬಂಧದ ಅಧ್ಯಯನ ಹೆಚ್ಚು ನಡೆಯದಿರುವ ಕಾಲದಲ್ಲಿ ಹನೂರು ಅವರು ಇಪ್ಪತ್ತೈದು ವರ್ಷಗಳ ಹಿಂದೆಯೇ ವ್ಯಾಪಕ ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿ ಈ ಗ್ರಂಥವನ್ನು ಹೊರ ತಂದಿದ್ದಾರೆ. ಬುಡಕಟ್ಟು ಸಂಸ್ಕೃತಿ ಮತ್ತು ಜಾನಪದ ಕ್ಷೇತ್ರದಲ್ಲಿ ಹನೂರು ಅವರ ಪರಿಣಿತಿ ಎಂಥದ್ದು ಎಂಬುದನ್ನು ಈ ಗ್ರಂಥ ಸ್ಪಷ್ಟಪಡಿಸುತ್ತದೆ"[೧] ಇವರ ಈ ಸೃಜನಾತ್ಮಕ ಪ್ರತಿಭೆಯನ್ನು ಗುರುತಿಸಿ ಜಾನಪದ ಅಕಾಡೆಮಿ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಜಾನಪದ ತಜ್ಞ ಪ್ರಶಸ್ತಿ ಹಾಗೂ ಇನ್ನಿತರ ಸಂಘ ಸಂಸ್ಥೆಗಳು ಬಹುಮಾನ, ಪುರಸ್ಕಾರಗಳನ್ನು ನೀಡಿ ಗೌರವಿಸಿವೆ.

ಸಾಹಿತ್ಯಿಕ, ಭೌಗೋಳಿಕ ಹಾಗೂ ಸಾಂಸ್ಕೃತಿಕವಾಗಿ ಚಾಮರಾಜನಗರ ಜಿಲ್ಲೆಗೆ ಕರ್ನಾಟಕ ರಾಜ್ಯದಲ್ಲಿ ಮಹತ್ವದ ಸ್ಥಾನವಿದೆ. ಜಾನಪದದ ಸೊಗಡನ್ನು ಮೈಗಂಟಿಸಿಕೊಂಡಿರುವ ಈ ಜಿಲ್ಲೆ ಮಲೆ ಮಹದೇಶ್ವರ, ಮಂಟೇಸ್ವಾಮಿಯ ಮಹಾಕಾವ್ಯಗಳ ತವರು ನೆಲವಾಗಿದೆ. ಇಂತಹ ಜಿಲ್ಲೆಯಲ್ಲಿ ೧೯೫೦ ರ ಆಗಸ್ಟ್ ೨೮ ರಂದು ಕೊಳ್ಳೇಗಾಲ ತಾಲ್ಲೂಕಿನ ಹನೂರು ಎಂಬ ಗ್ರಾಮದಲ್ಲಿ ಜನಿಸಿದರು. ಹನೂರಿನ ಉತ್ತರಕ್ಕೆ ಸುಮಾರು ಇಪ್ಪತ್ತೈದು ಮೈಲಿಗಳಷ್ಟು ದೂರದಲ್ಲಿ ಮಂಟೇಸ್ವಾಮಿ ನೆಲೆಸಿದ್ದಾರೆ. ದಕ್ಷಿಣಕ್ಕೆ ನಲವತ್ತು ಮೈಲಿಗಳಷ್ಟು ದೂರದಲ್ಲಿ ಮಲೆಯ ಮಹದೇಶ್ವರ ಅರಣ್ಯ ಪ್ರದೇಶ, ದಕ್ಷಿಣಕ್ಕೆ ಮೂವತ್ತು ಮೈಲಿ ದೂರದಲ್ಲಿ ಬಿಳಿಗಿರಿ ರಂಗನು ನೆಲೆಸಿದ್ದಾನೆ. ಸುತ್ತ ಮುತ್ತಲೂ ಬೆಟ್ಟ ಗುಡ್ಡಗಳಿಂದ ಕೂಡಿದ ಹಚ್ಚ ಹಸುರಿನ ಅರಣ್ಯ ಪ್ರದೇಶವಿರುವುದರಿಂದ ನೀರಿನ ಸೌಲಭ್ಯ ಸಮೃಧಿಯಿಂದ ಕೂಡಿದ ಪ್ರದೇಶ, ಒಂದು ರೀತಿಯಲ್ಲಿ ಆಧುನಿಕದ ಸ್ಪರ್ಶವೇ ಇಲ್ಲದ, ಭಾರತೀಯ ಸಂಸ್ಕೃತಿಯ ಸಮೃದ್ಧವಾದ

ಪದೇಶವಾಗಿತ್ತು. ಶಾಲೆ, ವಿದ್ಯುತ್, ಇನ್ನಿತರೇ ಯಾವುದೇ ಸೌಲಭ್ಯವಿಲ್ಲದೇ ಇದ್ದ ಕಾಲದಲ್ಲಿ ಕೃಷ್ಣಮೂರ್ತಿಯವರು ಹನೂರಿನಲ್ಲಿ ಜನಿಸಿದರು.

ಹನೂರು ಮುಂದುವರೆದ ಗ್ರಾಮವಾಗದೇಹೋದರೂ ಸಾಹಿತ್ಯಿಕವಾಗಿ ಆಸಕ್ತಿದಾಯಕವಾಗಿದ್ದ ಗ್ರಾಮ. ಹನೂರರ ತಂದೆ ಅಳಸಿಂಗರ್ಯೆಯ್ಯ ಸಾಂಪ್ರದಾಯಿಕ ವಿದ್ಯಾಭ್ಯಾಸದಿಂದ ದೂರವಿದ್ದರೂ, ಅವರಿವರ ಬಳಿ ಹೇಳಿಸಿಕೊಂಡು ವಿದ್ಯೆಗೆ ಒಲಿದವರು, ಅಳಸಿಂಗರ್ಯೆಯ್ಯ ಅವರು ಸಾಹಿತ್ಯಿಕವಾಗಿ ಓದುವ ಹವ್ಯಾಸವಿದ್ದು, ಕುಮಾರವ್ಯಾಸ ಭಾರತ, ಜೈಮಿನಿಯ ಭಾರತವನ್ನು ದೀಪದ ಬೆಳಕಿನಲ್ಲಿ ಓದುವ ಅಭ್ಯಾಸವಿತ್ತು. ಜೊತೆಗೆ ಜಾನಪದ ಹಾಡುಗಳು, ಕಥೆಗಳನ್ನು ಹೇಳುತ್ತಿದ್ದರು. ಇಂತಹ ಕೌಟುಂಬಿಕ ಹಿನ್ನೆಲೆಯ ಕೃಷ್ಣಮೂರ್ತಿ ಅವರಿಗೆ ವರದಾನವಾಯಿತು. "ನಾಗರೀಕತೆ ಪ್ರವೇಶವಾಗುವ ಮುನ್ನ ಇದ್ದ ವಾಚಕ ಪರಂಪರೆಯನ್ನು ಇವರು ಅನುಸರಿಸಿದರು"[3] ಒಟ್ಟಿನಲ್ಲಿ ಹನೂರು ಅವರು ಭವಿಷ್ಯದಲ್ಲಿ ಸನ್ನಡತೆಯ, ಸಜ್ಜನಿಕೆಯ ವ್ಯಕ್ತಿಯಾಗಿ ರೂಪುಗೊಳ್ಳುವಂತಹ ಒಳ್ಳೆಯ ಅಚಾರ-ವಿಚಾರಗಳನ್ನು, ರೀತಿ - ನೀತಿಗಳು ಮನೆಯ ವಾತಾವರಣವೇ ಕಲಿಸಿತೆಂಬುದು ಸತ್ಯ.

**ಬಾಲ್ಯ :** ಕೃಷ್ಣಮೂರ್ತಿ ಹನೂರು ಅವರು ತಮ್ಮ ಬಾಲ್ಯವನ್ನು ಹನೂರಿನಲ್ಲೆ ಕಳೆದುದು ಅವರ ಅದೃಷ್ಟ, ನಂತರದ ದಿನಗಳಲ್ಲಿ ಈ ಅವಕಾಶ ದೊರೆತೆ ಇಲ್ಲವೆನ್ನಬಹುದು. ಬದುಕನ್ನು ಸಾಗಿಸಲು ಕೆಲಸ ದೊರೆತ ಮೇಲೆ ಹನೂರು ಪ್ರವಾಸದ ತಾಣವಾದುದು ವಾಸ್ತವವಾಗಿದೆ. ಪ್ರಾಥಮಿಕ ಶಿಕ್ಷಣದಿಂದ ಪ್ರೌಢ ಶಿಕ್ಷಣದ ಬಗೆಗೆ ಕೃಷ್ಣಮೂರ್ತಿ ಅವರ ವಿದ್ಯಾಭ್ಯಾಸವನ್ನು ಹೊರತು ಪಡಿಸಿದರೆ ಉಳಿದೆಲ್ಲ ದಿನಗಳೂ ಹೊರಗಿನ ತಾಣಗಳಾದ ಬೆಂಗಳೂರು, ಮೈಸೂರು, ಚಿತ್ರದುರ್ಗ, ಮದರಾಸುಗಳಲ್ಲಿ ಕಳೆದಿದ್ದಾರೆ. ಇವರ ಗ್ರಾಮಕ್ಕೆ ನಾಗರೀಕತೆಯ ಸ್ಪರ್ಶವಿಲ್ಲದಿದ್ದರೂ ಹನೂರರು ಹೊರಗಿನ ಪ್ರಪಂಚಕ್ಕೆ ಬಂದು ತಮ್ಮದೇ ಆದ ಬದುಕು ಕಂಡವರು. ಇವರ ಬಾಲ್ಯವು ವಿದ್ಯಾಭ್ಯಾಸಕ್ಕೆ ಅಷ್ಟೇನು ಉತ್ತಮ ಸವಲತ್ತನ್ನು ಒದಗಿಸಿಲ್ಲದ್ದರಿಂದ ಕಷ್ಟದಲ್ಲಿಯೇ ವಿದ್ಯೆ ಸಂಪಾದಿಸಬೇಕಾಯಿತು. ಗ್ರಾಮೀಣ ವಿದ್ಯಾರ್ಥಿಯ ವಿದ್ಯಾಭ್ಯಾಸ ಇಂದೂ ಕೂಡಾ ಕಷ್ಟವೇ.

ಇನ್ನು ಐವತ್ತು, ಅರವತ್ತರ ದಶಕದಲ್ಲಿ ಕಷ್ಟದ ಜೊತೆಗೆ ಪ್ರೋತ್ಸಾಹಿಸುವವರ ಕೊರತೆಯಲ್ಲಿಯೂ ಕಾಡಿನೊಳಗಿನ ಕಾಡು ಹೂ.. ಅರಳಿದಂತೆ ಬೆಳೆದು ಬಂದವರು. ಆರ್ಥಿಕವಾಗಿ ಕೊರತೆಯಿಲ್ಲದಿದ್ದರೂ, ಅಂತಹ ಶ್ರೀಮಂತರೂ ಅಲ್ಲದ ಮಧ್ಯಮ ವರ್ಗದಲಿ ಗುರುತಿಸಿಕೊಂಡವರು. ರೈತ ಕುಟುಂಬವಾದ್ದರಿಂದ ತಮ್ಮ ಹಳ್ಳಿಯಲ್ಲಿಯೆ ಹೊಲದಲ್ಲಿ ಬೇಸಾಯವೇ ಜೀವನಕ್ಕೆ ಆಧಾರವಾಗಿತ್ತು. ಪ್ರಾಥಮಿಕ ಶಿಕ್ಷಣಕ್ಕೆ ಗ್ರಾಮದಲ್ಲೇ ಇದ್ದ ಶಾಲೆಗೆ ಹೋಗುತ್ತಿದ್ದರಿಂದ ಯಾವ ತೊಂದರೆಯೂ ಇಲ್ಲದೆ ಮುಗಿಸಿದರು. ಬಾಲ್ಯದ ತುಂಟಾಟಗಳೊಡನೆ ಸ್ನೇಹಿತರೊಂದಿಗೆ ತಂದೆ ತಾಯಿಯ ಆಶ್ರಯದಲ್ಲೇ ಪೂರ್ಣ ಪ್ರೀತಿ ಕಂಡವರು. ಪ್ರಾಥಮಿಕ ಶಿಕ್ಷಣ ಮುಗಿದ ನಂತರ ಮುಂದೆ ಪ್ರೌಢ ಶಾಲೆಗೆ ಸೇರಲು ತಮ್ಮ ಹಳ್ಳಿಯಲ್ಲಿ ಶಾಲೆಯ ಸೌಲಭ್ಯ ಇಲ್ಲದ್ದರಿಂದ

ದಿನನಿತ್ಯ ಹೊಲಕ್ಕೆ ಹೋಗುವುದು, ದನ ಕರು ಮೇಯಿಸುವುದು, ಮನೆಗೆ ಬರುವುದೇ ದಿನನಿತ್ಯದ ಕೆಲಸವಾಯಿತು. ಇಷ್ಟಕ್ಕೆ ಶಿಕ್ಷಣ ನಿಲ್ಲುವ ಹಂತದಲ್ಲೂ ಇತ್ತು. ವಿಧಿ ಎಂದೂ ಯಾರನ್ನೂ ಕೂರಲು ಬಿಡುವುದಿಲ್ಲ. ಹನೂರರ ಅದೃಷ್ಟ ಬೇರೆಯೇ ಆಗಿತ್ತು. ಅದೇ ವರ್ಷ ಹನೂರಿನಲ್ಲಿಯೇ ಪ್ರೌಢಶಾಲೆ ಪ್ರಾರಂಭವಾಗಿ ಅಲ್ಲಿಗೆ ವಿದ್ಯಾರ್ಥಿಗಳು ಅವಶ್ಯಕವಾಗಿ ಬೇಕಾಗಿತ್ತು. ಇದು ಕೃಷ್ಣಮೂರ್ತಿಯವರ ಬದಲಾದ ಜೀವನದ ತಿರುವಾಯಿತು. "ಪ್ರಾಥಮಿಕ ಶಾಲೆ ಪಾಸಾಗಿ ದಿಕ್ಕು ದಿಕ್ಕಿಗೂ ಮುಖ ಹಾಕಿ ನಿಂತಿದ್ದ ಹೈದರನ್ನೆಲ್ಲ ಒಟ್ಟು ಮಾಡಿ ಪ್ರೌಢಶಲೆಗೆ ಎಳೆದುಕೊಂಡು ಹೋಗಿ ಕೂರಿಸಿದವನು ಲಕ್ಷ್ಮಣ ಎಂಬ ಶಾಲೆಯ ಸಹಯಕ. ಈ ಕಾರಣಕ್ಕೆ ಕೃಷ್ಣಮೂರ್ತಿಯವರಿಗೆ ತನ್ನ ಓದಿದ ಮೂಲ ಪುರುಷ ಲಕ್ಷ್ಮಣನೇ ಎಂಬುದು ನಿರಂತರ ನೆನಪಾಗಿ ಉಳಿದುಬಿಟ್ಟಿದೆ" [೩] ಬದುಕಿನ ಪ್ರತಿಯೊಂದು ಹಂತದಲ್ಲೂ ಯಾರಿಂದಲೋ, ಯಾವ ಸಮಯದಲ್ಲೋ ನಮಗೆ ಒಳ್ಳೆಯದಾಗುತ್ತದೆ. ಆದನ್ನು ಸದಾ ನೆನಪಿಟ್ಟುಕೊಂಡರೆ ಅದು ಅವರಿಗೆ ಕೃತಜ್ಞತೆ ಸಲ್ಲಿಸಿದ ಹಾಗೆ. ಇಂತಹ ಉತ್ತಮ ವ್ಯಕ್ತಿತ್ವ ಕೃಷ್ಣಮೂರ್ತಿ ಅವರದು.

**ಉನ್ನತ ವಿದ್ಯಾಭ್ಯಾಸ :-**

ಪ್ರೌಢಶಾಲೆ ಮುಗಿದ ಬಳಿಕ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಬೆಂಗಳೂರಿಗೆ ಪ್ರಯಾಣ ಬೆಳೆಸಿದರು. ಅಲ್ಲಿಯ ವಿಜಯ ಕಾಲೇಜಿಗೆ ಸೇರ್ಪಡೆಗೊಂಡು, ಬಿ.ಎಂ.ಶ್ರೀ ಶಿಷ್ಯರಾದ ಜಿ. ವೆಂಕಟಸುಬ್ಬಯ್ಯ ಅವರ ಪಾಠ ಕೇಳುವ ಅವಕಾಶ ದೊರೆತದ್ದು ಹನೂರರ ಸಾಹಿತ್ಯಿಕ ಚಟುವಟಿಕೆಗೆ ಸಹಕಾರಿಯಾಯಿತು. ನಂತರ ಬಿ.ಎಸ್ಸಿ ಸೇರುವ ಆಸೆ ಹೊತ್ತ ಹನೂರರು ಬೆಂಗಳೂರಿನ ಸೆಂಟ್ರಲ್ ಕಾಲೇಜಿಗೆ ಸೇರ್ಪಡೆಗೊಂಡರು. ಆದರೆ ವೆಂಕಟಸುಬ್ಬಯ್ಯ ಅವರ ಸಲಹೆಯ ಮೇರೆಗೆ ಬಿ.ಎ ಆನರ್ಸ್ ಸೇರಿದರು. ಇದು ಅವರನ್ನು ಸಾಹಿತ್ಯದ ಕಡೆಗೆ ತಿರುಗಿಸಿದ ಮಹತ್ವದ ಕಾಲ. ಇದರಿಂದಾಗಿ ಮಂಕುತಿಮ್ಮನ ಕಗ್ಗ, ರನ್ನನ ಗಧಾಯುದ್ಧ, ಕೇಶಿರಾಜನ ಶಬ್ದಮಣಿ ದರ್ಪಣ, ಪಂಪಭಾರತ, ಬಿ.ಎಂ.ಶ್ರೀ ರವರ ಇಂಗ್ಲೀಷ್ ಗೀತೆಗಳು ಹೀಗೆ ಕನ್ನಡ ಸಾಹಿತ್ಯದ ಆಳವಾದ ಅಧ್ಯಯನಕ್ಕೆ ದಾರಿ ಮಾಡಿಕೊಟ್ಟಿತು. ಅಧ್ಯಯನವೇ ಜೀವನದ ಪರಮ ಗುರಿಯಾಗಿ ಪರಿಣಮಿಸಿ ಸಾಹಿತ್ಯದ ಹಸಿವು ಪ್ರಾರಂಭವಾಯಿತು. ಇದಕ್ಕೆ ಸೊಪ್ಪು ಹಾಕದಂತೆ ಮುಂದೆ ಬಿ.ಎ ಆನರ್ಸ್ ಮುಗಿದು ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಸ್ನಾತಕೋತ್ತರ ಪದವಿಗೆ ೧೯೭೧ ರಲ್ಲಿ ಪ್ರವೇಶ ಪಡೆದು ಜಿ.ಎಸ್.ಎಸ್, ಹಂಪನಾ, ರಂ.ಶ್ರೀ ಮುಗಳಿ, ಎಂ. ಚಿದಾನಂದಮೂರ್ತಿ, ಎಂ.ವಿ. ಸೀತಾರಾಮಯ್ಯ, ಚಂದ್ರಶೇಖರ ಕಂಬಾರ ಮುಂತಾದ ಹಿರಿಯ ಗುರುಗಳಿಂದ ಪ್ರಾಚೀನ ಸಾಹಿತ್ಯ, ಸಂಸ್ಕೃತಿಯ ಅರಿವು, ಇತಿಹಾಸ ಹಾಗೂ ಶಾಸನ ಅಧ್ಯಯನಗಳ ಮೇಲೆ ಆಸಕ್ತಿ ಹೆಚ್ಚಾಯಿತು. ಆದರೆ ವಿಶೇಷವಾಗಿ ಕೃಷ್ಣಮೂರ್ತಿ ಅವರಿಗೆ ಚಿದಾನಂದ ಮೂರ್ತಿ ಅವರ ಸಂಶೋಧನಾತ್ಮಕ ಬೋಧನೆ, ಶಾಸನಗಳ ಅಧ್ಯಯನದ ಕಡೆಗೆ ಒಲವು ಮೂಡಿತು. ಹೀಗೆ ಇವರ ವಿದ್ಯಾಭ್ಯಾಸದ ದಿನಗಳಲ್ಲಿ ಸಾಹಿತ್ಯ, ಸಂಶೋಧನೆಯ ಮಹತ್ವದ ಹಾಗೂ ಈ

ಕ್ಷೇತ್ರಗಳಲ್ಲಿ ದುಡಿಯಬೇಕೆಂಬ ಆಸೆ ಮೊಳಕೆಯೊಡೆಯಿತ್ತು. ಇದಕ್ಕೆ ಒತ್ತಾಸೆಯಾಗಿ ಸಹಕಾರಿಯಾದದ್ದು ಹನೂರು ಅವರ ಉದ್ಯೋಗ ಹಾದಿಗಳು.

**ವೃತ್ತಿ ಜೀವನ ಮತ್ತು ಕ್ಷೇತ್ರಕಾರ್ಯ :-**

೧೯೭೩ ರಲ್ಲಿ ಎಂ.ಎ ಮುಗಿಸಿದ ನಂತರ ತಮ್ಮ ವೃತ್ತಿ ಜೀವನವನ್ನು ಪ್ರಾರಂಭಿಸಿದ ಹನೂರರು ಪ್ರಥಮವಾಗಿ ಚಿತ್ರದುರ್ಗ ಜಿಲ್ಲೆಯ ಸರ್ಕಾರಿ ಕಾಲೇಜೊಂದರಲ್ಲಿ ಅಧ್ಯಾಪಕರಾಗಿ ಸೇರಿದರು. ಈ ಅವಧಿಯಲ್ಲಿ ಶಾಸನ ಅಧ್ಯಯನವನ್ನು ಪ್ರಾರಂಭಿಸಬೇಕೆಂದು ನಿಶ್ಚಯಿಸಿದರು. ಇದರಂತೆಯೇ "ಚಿದಾನಂದ ಮೂರ್ತಿಯವರ ಕ್ಷೇತ್ರಕಾರ್ಯದ ಸಾಧನೆ ಇವರ ಮನಸ್ಸಿನಲ್ಲಿದ್ದುದರಿಂದ ಚಿತ್ರದುರ್ಗ ಪ್ರದೇಶದಲ್ಲಿ ಶಾಸನಗಳ ಹುಡುಕಾಟಕ್ಕೆ ಪರದಾಡಿದರು. ಯಾವುದೇ ಶಾಸನ ನೋಡಿ ಪಡಿಯಚ್ಚು ತೆಗೆದು ಅಧ್ಯಯನಕ್ಕೆ ತೊಡಗಿದಾಗಲೂ, ಆ ವೇಳೆಗಾಗಲೇ ಬಿ.ಎಲ್. ರೈಸ್ ರಿಂದ ಓದಲ್ಪಟ್ಟಿದೆ ಎಂಬ ಸತ್ಯ ತಿಳಿಯುತ್ತಿತ್ತು. ಶಾಸನಗಳ ಕ್ಷೇತ್ರಕಾರ್ಯದಿಂದ ಇವರ ಮನಸ್ಸು ಹಿಂತೆಗೆಯಿತು".[೬] ಕೃಷ್ಣಮೂರ್ತಿಯವರ ಕಾಲಕ್ಕೆ ಶಾಸನಗಳನ್ನು ಹುಡುಕಿ ತೆಗೆದು ಓದುವ ಕಾರ್ಯ ಬಹುತೇಕ ಮುಗಿದಿತ್ತು. ಇಂತಹ ಸಂದರ್ಭದಲ್ಲಿ ಶಾಸನಗಳ ಹುಡುಕಾಟಕ್ಕೆ ಎಳ್ಳು ನೀರು ಬಿಟ್ಟರು. ಸಾಹಿತ್ಯದ ಒಡನಾಟವಿದ್ದ ಗ್ರಾಮಲೆಕ್ಕಿಗರಾದ ಕೊ.ಶ. ವಿಶ್ವನಾಥರ ಒಡನಾಟ ದೊರೆಯಿತು. ಪರಸ್ಥಳದಲ್ಲಿ ಸಿಕ್ಕ ಉತ್ತಮ ಸ್ನೇಹ ಅದು. ಇದರಿಂದಾಗಿ ಜಾನಪದದ ಗೀತೆಗಳ ಸಿಗಸು ತಿಳಿದು, ನೂರಾರು ವರ್ಷಗಳ ಇತಿಹಾಸದ ಗೀತೆಗಳನ್ನು ಕೇಳುವ ಅವಕಾಶ ದೊರೆಯಿತು. ಶಾಸನಗಳನ್ನು ಇನ್ನು ಮುಂದೆ ಓದುವ ಹವ್ಯಾಸ ಬೇಡವೆಂದು ನಿರ್ಧರಿಸಿಯಾಗಿತ್ತು. ಹಾಗಾಗಿ ಹನೂರರ ಮನಸ್ಸು ಗೀತೆಯ ಅರಿವು ಕಂಡಿತು. ಅಲ್ಲಿಯವರೆಗೂ ಜಾನಪದ ಸಾಹಿತ್ಯದ ಪೂರ್ಣ ಪರಿಚಯವಾಗಿರಲಿಲ್ಲ. ಇದು ಸಂಪೂರ್ಣ ಹೊಸ ವಿಷಯವಾದ್ದರಿಂದ ಮೊದಲಬಾರಿಗೆ ಆಸಕ್ತಿ ವಹಿಸಿ ಮೊಳಕಾಲ್ಮೂರು ತಾಲ್ಲೂಕು ಗೌರಸಂದ್ರಕ್ಕೆ ತೆರಳಿ ನಾನಾ ರೀತಿಯ ವಿವಿಧ ಹಾಡುಗಳನ್ನು ಕೇಳಿದರು. ಆದರೆ ಇವರಿಗೆ ಯಾವ ಹಾಡು, ಅದರ ಸಾಲುಗಳು ಏನೆಂಬುದೇ ತಿಳಿಯಲಿಲ್ಲ. ಹಾಡಿನ ರಾಗವಷ್ಟೆ ತಿಳಿಯಿತೆಂಬುದು ಸರಿಯೇ. ಆ ಹಾಡು ಅದೇ ಸ್ಥಳದಲ್ಲಿ ವಾಸವಾಗಿದ್ದ ಗೌಡನ ಕೊಲೆಯ ಸುತ್ತ ಹೆಣೆದಿದ್ದ ಗೀತೆಯಾಗಿತ್ತು. ಹೀಗೆ ಹಂತ ಹಂತವಾಗಿ ಚಿತ್ರದುರ್ಗದ ಜಾನಪದದ ಶ್ರೀಮಂತಿಕೆಯ ಅರಿವು ತಿಳಿಯಿತು. ಅಷ್ಟರಲ್ಲಾಗಲೇ ೧೯೬೫ ರ ಸಂಧರ್ಭದಲ್ಲೇ ಕ.ರಾ. ಕೃಷ್ಣಸ್ವಾಮಿ, ಪಿ.ಆರ್. ತಿಪ್ಪೆಸ್ವಾಮಿ ಕ್ಷೇತ್ರಕಾರ್ಯದ ಮೊದಲ ಪ್ರಯತ್ನ ಮಾಡಿದ್ದರು. ಆದರೂ ಇವರ ವ್ಯಾಪ್ತಿಗೆ ನಿಲುಕದ ನೂರಾರು ಹಾಡುಗಳ ಸಂಗತಿ ಹನೂರರಿಗೆ ತಿಳಿಯಿತು. ಚಿತ್ರದುರ್ಗದ ಸಾಹಿತ್ಯ ಪ್ರಿಯರಲ್ಲಿ ಒಬ್ಬರಾದ ಬೆಳಗೆರೆ ಕೃಷ್ಣಶಾಸ್ತ್ರಿ (ಈಗ ತೊಂಭತ್ತೈದು ವರ್ಷ) ಗಳ ಪರಿಚಯದಿಂದ ಜನಪದ ಹಾಡುಗಳ ಸಿರಿ ಎನಿಸಿದ್ದ "ಸಿರಿಯಜ್ಜಿಯನ್ನು ಕಂಡರು. ಸಿರಿಯಜ್ಜಿಯಿಂದ 'ಸಿರಿಯಣ್ಣನ ಹಾಡು', 'ಜುಂಜಪ್ಪನ ಹಾಡು, ಗಂಗೆ ಗೌರೀ, ನಿಂಗಣ್ಣ ಸೆರೆಹೋದ, ಕೊಂಡದ ಕಾಟವ್ವ, ೧೫೦೦ ತ್ರಿಪದಿಗಳ ಗೊಲ್ಲರ ಮದುವೆ, ಸಂಪ್ರದಾಯ ಮತ್ತು

ಅವರ ಬದುಕಿನ ವಿವಿಧ ಸಂಧರ್ಭದ ಹಾಡುಗಳು ಮುಂತಾದ ಅಪಾರ ಜನಪದ ಸಾಹಿತ್ಯವನ್ನು ಸಂಗ್ರಹಿಸಿದರು". "

ನಂತರದಲ್ಲಿ ಹನೂರರು ಜಾನಪದದ ಒಂದು ಪ್ರಕಾರವನ್ನು ಸಂಗ್ರಹಿಸಬೇಕೆಂದುಕೊಂಡು ಗಿರಿಯಯ್ಯ ಎಂಬ ಕಥೆಗಾರರಿಂದ ಏಳು ಕಥೆಗಳನ್ನು ಸಂಗ್ರಹಿಸಿದರು. ೧೯೭೭ ರಲ್ಲಿ ಇದು ಲೀಲಾವತಿ ಪದ್ಮಾವತಿ ಎಂಬ ಹೆಸರಿನಿಂದ ಪ್ರಕಟಗೊಂಡಿತು. ಎ.ಕೆ. ರಾಮಾನುಜನ್ ರ ಪರಿಚಯವಾದ ಮೇಲೆ ಕಥೆಗಳ ಅಂತರಂಗವನ್ನು ಅರಿತ ಹನೂರರು ಅದರಲ್ಲಿನ ಜಾನಪದೀಯ ಸಾರವನ್ನು ತಿಳಿದುಕೊಂಡರು. ಮುಂದಿನ ದಿನಗಳಲ್ಲಿ ಸ್ತ್ರೀ ಲೋಕದ ಕಥನ ಗೀತೆಗಳುಳ್ಳ 'ಕತ್ತಲದಾರಿ ದೂರ', ಪುರಷರದೇ ಪ್ರತ್ಯೇಕ ಎಂಬಂತೆ 'ವೀರಗೀತೆ' ಗಳ ಹೆಸರಿನಲ್ಲಿ ಪ್ರಕಟಾವಾಯಿತು. ಹನೂರರು ಜನಪದ ಸಾಹಿತ್ಯ ಸಂಗ್ರಹಣೆಯ ಜೊತೆಗೆ ಜನಪದ ಕಲಾವಿದರ ಬದುಕನ್ನು ಬರೆದು ಲಂಕೇಶ್ ಪತ್ರಿಕೆ, ಪ್ರಜಾವಣಿ, ಜಾನಪದ ಜಗತ್ತು ಇನ್ನೂ ಅನೇಕ ಪತ್ರಿಕೆಗಳಲ್ಲಿ ಪ್ರಕಟಿಸಿದರು. ಕಲಾವಿದರ ಕುರಿತು ಬರೆಯಲು ಹನೂರರಿಗೆ ಆಸಕ್ತಿ ಬೆಳೆಯಿತು. ಇದರಿಂದ ಹಾಡಿನ ಸಂಗ್ರಹಣೆಗಿಂತ ಆ ಕಲಾವಿದರ ಬದುಕನ್ನು ಕುರಿತಂತೆ ಬರೆದರು. ಇದನ್ನು ಅರಿತ ಚಿದಾನಂದ ಮೂರ್ತಿ ಅವರು ಈ ಕ್ಷೇತ್ರಕಾರ್ಯವನ್ನೆ ಬೆಳೆಸಿಕೊಂಡು ನೀವೇಕೆ ಪಿ.ಎಚ್‌ಡಿ., ಪಡೆಯಬಾರದು ಎಂಬ ಸಂದೇಶವನ್ನು ನೀಡಿದರು. ಇದನ್ನೆ ವೇದವಾಕ್ಯವೆಂದು ಪರಿಗಣಿಸಿದ ಹನೂರರು (೧೯೮೪) 'ಮ್ಯಾಸಬೇಡರ ಸಂಸ್ಕೃತಿ' ಎಂಬ ವಿಷಯ ಕುರಿತು ಸಂಶೋಧನೆಗೆ ತೊಡಗಿದರು. ಸುಧೀರ್ಘ ೬ ವರ್ಷಗಳ ಅವಧಿಯಲ್ಲಿ ಅಧ್ಯಯನ ಮುಗಿಸಿ ೧೯೯೦ ರಲ್ಲಿ ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಗೌರವ ಡಾಕ್ಟರೇಟ್ ಪದವಿಯನ್ನು ಪಡೆದರು. ೧೯೮೬ ರಿಂದ ೧೯೯೦ ರ ನಡುವೆ Institute of Asian Studies, Chennai ವತಿಯಿಂದ "Encyclopaedia of Folk Culture of Karnataka" ಎಂಬ ಗ್ರಂಥವನ್ನು ಸಿದ್ಧಪಡಿಸಿದರು. ಇದು ಜಾನಪದಕ್ಕೆ ವಿಶ್ವಕೋಶವಾಯಿತು.

೧೯೯೮ ರಲ್ಲಿ ಹನೂರರು ಹಲವು ಸಂಪಾದಕರಲ್ಲಿ ಒಬ್ಬರಾಗಿ ದುಡಿದು ಕರ್ನಾಟಕದ ಬುಡಕಟ್ಟುಗಳ ಯೋಜನೆಯಲ್ಲಿ ಎರಡು ಬೃಹತ್ ಸಂಪುಟಗಳನ್ನು ಹೊರತಂದರು. ಇದರಲ್ಲಿ ವಿವಿಧ ಲೇಖಕರು ಬರೆದಿದ್ದ ಉತ್ತಮ ಲೇಖನಗಳನ್ನು ಸಂಗ್ರಹಿಸಿ ೧೯೯೮ ರಲ್ಲಿ ಸುವರ್ಣ ಜಾನಪದ ಎಂಬ ಹೆಸರಿನಲ್ಲಿ ಪ್ರಕಟಗೊಳಿಸಿದರು.

ಹನೂರರು ತಮ್ಮ ಕ್ಷೇತ್ರಕಾರ್ಯದ ಅನುಭವವನ್ನೆಲ್ಲ ಲೇಖನಗಳ ರೂಪದಲ್ಲಿ ಬರೆದರು. ಇದು ವಿಶಿಷ್ಟ ಪ್ರವಾಸ ಕಥನವಾಗಿ ೨೦೦೨ ರಲ್ಲಿ ಪ್ರಕಟಗೊಂಡಿತು. ಅದುವೇ 'ಹಾದಿಯೊಳಗಣ ಜ್ಯೋತಿ'. ಹೆಸರಿನ ಅರ್ಥವೇ ಹೇಳುತ್ತದೆ. ಕ್ಷೇತ್ರಕಾರ್ಯದಲ್ಲಿ ದೊರೆತ ಸಾಹಿತ್ಯವೆಲ್ಲ ಒಂದು ಬೆಳಕು ಎಂದು. ಪಾಶ್ಚಾತ್ಯ ಸಂಸ್ಕೃತಿಯ ಬಲೆಯೊಳಗೆ ಸಿಲುಕಿರುವ ಪವಾಸ ಕಥನಗಳಿಗೆ ತದ್ವಿರುದ್ಧವೆಂಬಂತೆ ಭಾರತೀಯ ಸಂಸ್ಕೃತಿಯನ್ನು ಕುರಿತು ಹೇಳುವ ಈ 'ಹಾದಿಯೊಳಗಣ ಜ್ಯೋತಿ' ಶ್ರೇಷ್ಠತೆ ಪಡೆದಿದೆ.

ಹೀಗೆ ಹನೂರರು ಜನಪದ ಕ್ಷೇತ್ರಕಾರ್ಯದಲ್ಲಿ ತೊಡಗಿ ಸುಮಾರು ೨೫ ವರ್ಷಗಳ ಕಾಲ ದುಡಿದು ಆ ಅನುಭವದ ಹಿನ್ನೆಲೆಯಲ್ಲಿ ಜಾನಪದ ಸಾಹಿತ್ಯ ಮತ್ತು ಕಲಾವಿದರ ಬಗ್ಗೆ ಬರೆದರು. ಆನಪದದ ಮತ್ತು ಜನಪದರ ಬಗ್ಗೆ ಬರೆಯುತ್ತಲೇ ಅದರೊಳಗೆ ಸೃಜನಶೀಲತೆಯನ್ನು ಮೆರೆದರು. ಇದರಿಂದಾಗಿಯೇ 'ಕುಂಡಜ್ಜನ ಪರ್ಸಂಗ', 'ಬಿದ್ದಶಿಕಾರಿ', 'ಕೇರಿಗೆ ಬಂದ ಹೋರಿ' ಮುಂತಾದ ಕತೆಗಳು, 'ಬಾರೊ ಗೀಜಗನೆ' ಕಾದಂಬರಿ ಹೊಸರೂಪದೊಂದಿಗೆ ಹೊರಬಂದವು.

ಹನೂರರು ಚಿತ್ರದುರ್ಗ, ಮದರಾಸು ನಗರಗಳಲ್ಲಿ ತಮ್ಮ ವೃತ್ತಿಯನ್ನು ೧೯೮೮ ರವರೆಗೆ ಮುಂದುವರೆಸಿ ನಂತರ ಮೈಸೂರು ವಿಶ್ವ ವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿ ಇಂದಿನವರೆಗೂ ವೃತ್ತಿಯಲ್ಲಿ ಸಾಕಷ್ಟು ಗೌರವಾದರಗಳಿಗೆ ಪಾತ್ರರಾಗಿ ಅಧ್ಯಾಪಕ ವೃತ್ತಿ ಕೈಗೊಂಡು ತಮ್ಮ ವಿದ್ವತ್ತಿನ ಧಾರೆ ಎರೆದಿದ್ದಾರೆ. ತಮ್ಮ ವ್ಯಕ್ತಿತ್ವದಿಂದಲೇ ಅಪಾರವಾದ ಸ್ನೇಹಿತರು ಮತ್ತು ಶಿಷ್ಯವರ್ಗದವರನ್ನು ಅವರು ಗಳಿಸಿಕೊಂಡಿದ್ದಾರೆ. ಹನೂರರದು ಸುಖ ಸಂಸಾರ. ಪತ್ನಿ ಶ್ರೀಮತಿ ಸುಕನ್ಯ ಹಾಗೂ ಇಬ್ಬರು ಮಕ್ಕಳೊಂದಿಗೆ ಸಂತೃಪ್ತಿಯಿಂದ ಜೀವನ ನಡೆಸುತ್ತಿರುವ ಹನೂರರು ದೇಶೀ ಸಂಸ್ಕೃತಿಯ ಪ್ರತಿನಿಧಿಯೂ ಹೌದು.

ಕೃಷ್ಣಮೂರ್ತಿ ಹನೂರು ಅವರದು ಬಹುಮುಖ ಪ್ರತಿಭೆ. ಸಾಹಿತಿಯಾಗಿ, ವಿಮರ್ಶಕರಾಗಿ, ಜಾನಪದ ವಿದ್ವಾಂಸರಾಗಿ ಅವರು ರಾಷ್ಟ್ರದಾದ್ಯಂತ ಹೆಸರು ಮಾಡಿದವರು. ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ನಡೆದ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ ವಿದ್ವತ್ಪೂರ್ಣ ಪ್ರಬಂಧಗಳನ್ನು ಹಾಗೂ ಉಪನ್ಯಾಸಗಳನ್ನು ನೀಡಿದ್ದಾರೆ. "೧೯೮೧ ರಲ್ಲಿ ಚಿಕ್ಕಮಗಳೂರಿನಲ್ಲಿ ನಡೆದ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪು.ತೀ. ನರಸಿಂಹಾಚಾರ್ ಅವರ ಅಧ್ಯಕ್ಷತೆಯಲ್ಲಿ ಜಾನಪದ ಸಂಗ್ರಹವನ್ನು ಕುರಿತು ಹನೂರ ಅವರು ಉಪನ್ಯಾಸ ನೀಡಿದ್ದಾರೆ. ಬೆಂಗಳೂರು, ಮೈಸೂರು, ಮಂಗಳೂರು, ಧಾರವಾಡ, ಶಿವಮೊಗ್ಗ, ಮದರಾಸು ಮತ್ತು ಕೊಯಮತ್ತೂರು ವಿಶ್ವವಿದ್ಯಾನಿಲಯಗಳಲ್ಲಿ ಏರ್ಪಡಿಸಿದ್ದ ವಿಚಾರ ಸಂಕೀರ್ಣಗಳಲ್ಲಿ ಪ್ರಬಂಧ ಮಂಡಿನೆ ಮಾಡಿ ಚರ್ಚೆಗಳಲ್ಲಿ ಭಾಗವಹಿಸಿದ್ದಾರೆ. ಅಲ್ಲದೆ ಪಶ್ಚಿಮ ಬಂಗಾಳ, ಗುಜರಾತ್, ತಮಿಳುನಾಡು, ಕೇರಳ ಮತ್ತು ಆಂಧ್ರಪ್ರದೇಶ ಮೊದಲಾದ ಭಾಗಗಳಲ್ಲಿ ಜರುಗಿದ ವಿಚಾರಗೋಷ್ಠಿಗಳಲ್ಲಿ ಪ್ರಬಂಧ ಮಂಡಿಸಿದ್ದಾರೆ, ೧೯೮೭-೮೮ ರಲ್ಲಿ ಅಂತರ ರಾಷ್ಟ್ರೀಯ ಜಾನಪದ ಕಮ್ಮಟದಲ್ಲಿ ಭಾಗವಹಿಸಿದ್ದಾರೆ"[೬]. ೨೦೦೨ ರಲ್ಲಿ ನಡೆದ ಚಾಮರಾಜನಗರ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಮಾನ್ಯತೆ ಪಡೆದಿರುವ ಹನೂರರು ಹಲವು ರಾಜ್ಯಗಳಲ್ಲಿ ನಡೆದ ಜಾನಪದ ಕಮ್ಮಟಗಳಲ್ಲಿ ನಿರ್ದೇಶಕರಾಗಿ ಕೆಲಸ ಮಾಡಿದ್ದಾರೆ. ಹೀಗೆ ಹತ್ತು ಹಲವು ರೀತಿಯಲ್ಲಿ ಹನೂರರ ವಿದ್ವತ್ತು ಅನಾವರಣಗೊಂಡಿದೆ.

**ಸ್ನೇಹಿತರು ಮತ್ತು ಗುರುಗಳ ಪ್ರಭಾವ :-**

ಹನೂರರಿಗೆ ಪಿ.ಯು.ಸಿ ಸೇರಿದಾಗಲೇ ಜಿ. ವೆಂಕಟಸುಬ್ಬಯ್ಯನವರು ಮೊದಲ ಪ್ರಭಾವಿತ ಗುರುಗಳಾಗಿ ಪ್ರಭಾವ ಬೀರಿದರು. ಓದಲು ವಿಜ್ಞಾನ ಕ್ಷೇತ್ರದ ಆಯ್ಕೆ ಮಾಡಿಕೊಂಡಿದ್ದ ಹನೂರರಿಗೆ ಸಾಹಿತ್ಯದ ರುಚಿಹತ್ತಿಸಿದರು. ಸಂಶೋಧಕರಾದ ಎಂ. ಚಿದಾನಂದ ಮೂರ್ತಿ, ಕವಿ ಜಿ.ಎಸ್. ಶಿವರುದ್ರಪ್ಪ, ಸಾಹಿತ್ಯ ಚಿಂತಕರಾದ ರಂ.ಶ್ರೀ. ಮುಗಳಿ ಅವರು. ಈ ಮೂವರು ವಿದ್ವಾಂಸರು ಇವರ ಆಸಕ್ತಿ ಹೆಚ್ಚಿಸಿ ಗಂಭೀರ ಅಧ್ಯಯನಕ್ಕೆ ತೊಡಗುವಂತೆ ಮಾಡಿದರು. ಜಾನಪದ ವಿದ್ವಾಂಸರಾದ ಚಂದ್ರಶೇಖರ ಕಂಬಾರ, ಎಂ.ವಿ. ಸೀತಾರಾಮಯ್ಯ, ಹಂಪನ ಗುರುಗಳಾಗಿ ಪ್ರಭಾವ ಬೀರಿದರು. ಸೃಜನಶೀಲ ಸಾಹಿತ್ಯಕ್ಕೆ ಮಾಸ್ತಿ, ಟಾಲ್‌ಸ್ಟಾಯ್ ಅವರ ಪ್ರಭಾವ ಹೆಚ್ಚಾಗಿ ಹನೂರರ ಕಥೆ, ಕಾದಂಬರಿಗಳ ಮೇಲೆ ಆಗಿದೆ. ಅವರ ಸೌಜನ್ಯದ ಬರವಣಿಗೆಯು ಇದಕ್ಕೆ ಸಾಕ್ಷಿ.

ಹನೂರರಿಗೆ ಆರಂಭದಲ್ಲಿ ಕ್ಷೇತ್ರಕಾರ್ಯಕ್ಕೆ ಸಹಾಯ ನೀಡಿದವರು ಚಿತ್ರದುರ್ಗದ ಪರಿಚಿತರಾದ ಗ್ರಾಮಲೆಕ್ಕಿಗೆ ಕೊ.ಶ. ವಿಶ್ವನಾಥರು, ಇವರ ಸ್ನೇಹ ಹನೂರರಿಗೆ ದೊರೆತದ್ದು ಹೊಸ ಜಾಗದ ಪರಿಚಯ ಹಾಗೂ ಸಾಹಿತ್ಯದ ಹುಡುಕಾಟಕ್ಕೆ ಸಹಾಯಕವಾಯಿತು. ವಿಶ್ವನಾಥರಿಂದ ಜಾನಪದ ಗೀತೆಗಳ ಬಗ್ಗೆ ಗಮನಹರಿಸಿದ ಹನೂರರು ಗೀತೆಗಳನ್ನು ಸಂಗ್ರಹಿಸಿದರು. ನಂತರ ಚಳ್ಳಕೆರೆಯ ಬೆಳಗೆರೆ ಕೃಷ್ಣಶಾಸ್ತ್ರಿಗಳು ಪರಿಚಯವಾದರು. ಸಾಹಿತ್ಯ ಸಂಸ್ಕೃತಿಯ ಚಿಂತಕರಾಗಿದ್ದ ಇವರಿಗೆ ಹನೂರರ ಭೇಟಿ ಸಂತಸ ನೀಡಿತು. ಸಿರಿಯಜ್ಜಿಯ ಭೇಟಿ ಇವರಿಂದಲೇ ಆಗಿದ್ದು ಹನೂರರ ಕ್ಷೇತ್ರಕಾರ್ಯಕ್ಕೆ ಒತ್ತಾಸೆ ನೀಡಿತು. ಕೇವಲ ಸಂಗ್ರಹ ಕಾರ್ಯದಲ್ಲೇ ನಿರತರಾಗಿದ್ದ ಹನೂರರಿಗೆ ಎ.ಕೆ. ರಾಮಾನುಜನ್‌ರಿಂದ ಪ್ರಕಟ ಮಾಡುವ ಪ್ರೋತ್ಸಾಹ ದೊರೆಯಿತು. ಹಾಗೂ ಕತೆಗಳ ಬಗ್ಗೆ ಹನೂರರಿಗೆ ಒಳಸೂಕ್ಷ್ಮಗಳನ್ನು ತಿಳಿಸಿಕೊಟ್ಟರು. ಹಂಪನಾ ಅವರು ಕನ್ನಡ ಸಾಹಿತ್ಯ ಪರಿಷತ್ತು ಅಧ್ಯಕ್ಷರಾಗಿದ್ದಾಗ (೧೯೮೧) ಶಿಷ್ಯರಾದ ಹನೂರರ ಕ್ಷೇತ್ರಕಾರ್ಯದ ಸಂಗ್ರಹವಾದ 'ಕತ್ತಲದಾರಿ ದೂರ' ಸಂಕಲನವನ್ನು ಪ್ರಕಟಮಾಡಿ ಪ್ರೋತ್ಸಾಹಿಸಿದರು.

ಹನೂರರು ಬರೆದ ಲೇಖನಗಳನ್ನು, ಕಥೆ, ಕಾದಂಬರಿಗಳನ್ನು ಪತ್ರಿಕೆಯಲ್ಲಿ ಪ್ರಕಟಮಾಡಿ ಲಂಕೇಶ್ ತುಂಬಾ ಮೆಚ್ಚಿಕೊಂಡರು ಹಾಗೂ ಹನೂರರಿಗೆ ತಮ್ಮ ಪತ್ರಿಕೆಯ ಮೂಲಕ ಪ್ರೋತ್ಸಾಹಿಸಿದರು. ಹೀಗೆ ಜನಪದ ವಿಷಯವನ್ನು ಪಠ್ಯವಿಷಯವಾಗಿ ಅಭ್ಯಾಸ ಮಾಡದೇ ಹೋದರೂ ಜಾನಪದ ಕ್ಷೇತ್ರದಲ್ಲಿ ಹನೂರರು ಕಾರ್ಯೋನ್ಮುಖರಾದದ್ದು ಇಂತಹ ಗುರುಗಳ ಮತ್ತು ಸ್ನೇಹಿತರ ಸಹಕಾರ ಹಾಗೂ ಆಸಕ್ತಿ ಕಾರಣವಾಗಿದೆ.

**ವ್ಯಕ್ತಿತ್ವ :-**

ಕೃಷ್ಣಮೂರ್ತಿ ಹನೂರರದು ಮೃದು ಸ್ವಭಾವದ ಸ್ನೇಹಶೀಲ ವ್ಯಕ್ತಿತ್ವ. ಸಜ್ಜನಿಕೆ, ಸರಳತೆ, ಗಾಂಭೀರ್ಯ ಇವರ ವ್ಯಕ್ತಿತ್ವದಲ್ಲಿ ಹಾಸುಹೊಕ್ಕಾಗಿ ಬೆರೆತುಕೊಂಡಿದೆ. ವೃತ್ತಿಯಲ್ಲಿ, ವೈಯಕ್ತಿಕ ಜೀವನದಲ್ಲಿ ಒಂದು ಶಿಸ್ತನ್ನು ಅಳವಡಿಸಿಕೊಂಡು ಎಲ್ಲಾ

ಕಾರ್ಯಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸುತ್ತಾ ಬಂದಿದ್ದಾರೆ. ಉತ್ತಮ ಅಧ್ಯಾಪಕರಾಗಿ ಹೆಸರುಗಳಿಸಿರುವ ಹನೂರರು ಶಿಷ್ಯರ ಅಚ್ಚುಮೆಚ್ಚಿನ ಗುರುಗಳಾಗಿದ್ದಾರೆ. ಸತ್ಯ, ಪ್ರಾಮಾಣಿಕತೆ, ಬದುಕಿಗೊಂದು ಆದರ್ಶವನ್ನು ಅಳವಡಿಸಿಕೊಂಡು ತಮ್ಮ ನೇರ ನಡೆ ನುಡಿಯಿಂದ ಮುಂದೆ ಬಂದವರು. ಹುಟ್ಟಿದ ದಿನದಿಂದಲೂ ಕಷ್ಟ ಸುಖಗಳನ್ನು ಅನುಭವಿಸಿಕೊಂಡು ಸುತ್ತಮುತ್ತಲಿನ ಬಡತನ, ನೊಂದವರ ಬದುಕನ್ನು ಹತ್ತಿರದಿಂದ ಕಂಡವರು, ಅವರ ಪರವಾಗಿಯೇ ಶ್ರಮಿಸುತ್ತಾ ಬಂದಿದ್ದಾರೆ.

ಹನೂರರು ಮೂಲತಃ ಶಾಂತ ಸ್ವಭಾವದವರು, ಹಿತಮಿತದ ಮೃದುಭಾಷಿ, ಸಮಯ ಸಂಧರ್ಭಕ್ಕೆ ಎಷ್ಟು ಬೇಕೋ ಅಷ್ಟೇ ಮಾತು, ಸಂಧರ್ಭದ ಔಚಿತ್ಯವನ್ನು ಅರಿತು ಮಾತನಾಡುವ ಇವರು ಸಮಾಜದ ಅನ್ಯಾಯ, ಶೋಷಣೆ, ಅಸಮಾನತೆಗಳ ವಿರುದ್ಧ ದನಿಯೆತ್ತಿ ಮಾತಾಡುವ ಸಾಮರ್ಥ್ಯ ಪಡೆದವರು. ತಮ್ಮ ಸಾಹಿತ್ಯದಲ್ಲಿ ಸಮಾಜದ ಅನೇಕ ಕೆಡುಕುಗಳನ್ನು ವ್ಯಂಗಿಸಿದ್ದಾರೆ. ಸ್ವಾತಂತ್ರ್ಯ ನಂತರದ ದಿನಗಳಲ್ಲಿ ಬದಲಾದ ಆಧುನಿಕತೆ ಅದರ ಪ್ರಭಾರದಿಂದಾದ ಬದಲಾವಣೆ, ವಾಸ್ತವ ಸ್ಥಿತಿಗಳನ್ನು ಚರ್ಚಿಸುತ್ತಾರೆ.

ಹಳ್ಳಿಯಲ್ಲಿ ಹುಟ್ಟಿದ್ದರಿಂದ ಹನೂರರು ಆ ಜೀವನವನ್ನು ಅನುಭವಿಸಿ ಬೆಳೆದವರು. ನಂತರದ ದಿನಗಳಲ್ಲಿ ವಿದ್ಯಾಭ್ಯಾಸ ಹಾಗೂ ವೃತ್ತಿಯ ಕಾರಣದಿಂದ ನಗರ ಜೀವನ ಅವಶ್ಯಕವಾಯಿತು. ಹೀಗಾಗಿ ಈ ಎರಡು ಪರಿಸರಗಳೂ ಇವರ ವ್ಯಕ್ತಿತ್ವದ ಬೆಳವಣಿಗೆಗೆ ವಿಶೇಷ ಮೆರುಗು ಕೊಟ್ಟಿವೆ. ಈ ಎರೆಡು ಜೀವನ ವಿಧಾನಗಳ, ರೀತಿ–ನೀತಿಗಳು, ಬದುಕಿನ ಸಮಸ್ಯೆಗಳನ್ನು ತಮ್ಮ ಕೃತಿಗಳಲ್ಲಿ ತೆರೆದು ತೋರಿಸಿದ್ದಾರೆ.

ಹನೂರರು ಜಾತಿ ಪದ್ಧತಿಗೆ ಒಳಗಾಗಿಯೂ ಇಲ್ಲ, ಹೊರತಾಗಿಯೂ ಇಲ್ಲ. ಇವರ ಪ್ರಕಾರ ಜೀವನ ಜಾತಿಯ ಮೇಲೆ ಅವಲಂಬಿತವಾಗಿಲ್ಲ. ಗುಣ, ನಡತೆ, ಶ್ರಮ, ಯೋಗ್ಯತೆಗಳಿಂದ ಮನುಷ್ಯ ಉತ್ತಮನಾಗಲು ಸಾಧ್ಯ ಜಾತಿಯಿಂದಲೇ ಯಾರೂ ಉತ್ತಮರಲ್ಲ ಎಂದು ನಂಬಿ ನಡೆದವರು. ಹಾಗಾಗಿ ಜಾತಿ ಪರಿಕಲ್ಪನೆಯಿಂದ ಆಚೆನಿಂತು ಮಾನವೀಯ ಮೌಲ್ಯಗಳ ಕಡೆ ಮುಖ ಮಾಡಿದವರು. ಆದರೆ ಯಾವುದೇ ಒಂದು ಜಾತಿಯ ಸಂಪ್ರದಾಯ, ಆಚರಣೆಗಳನ್ನು ಎಂದೂ ವಿರೋಧಿಸಿದವರಲ್ಲ. ಆಚರಣೆಗಳು ನಂಬಿಕೆಗಳ ಹುತ್ತ. ಕೆಡವಿದಷ್ಟು ಹುಟ್ಟುತ್ತಲೇ ಇರುತ್ತದೆ. ಹಾಗಾಗಿ ಇದು ಪ್ರತಿಯೊಬ್ಬ ವ್ಯಕ್ತಿಯ ವೈಯಕ್ತಿಕ ಹಿತಾಸಕ್ತಿಯಾಗಿ ಕಾಣಬೇಕೆ ಹೊರತು ಸಮಾಜದ ಮೇಲೆ ಪ್ರಭಾವ ಬೀರಬಾರದು. ಸ್ವಸ್ತ ಸಮಾಜಕ್ಕೆ ಇದು ಮಾರಕವಾಗುತ್ತದೆ. ಎಲ್ಲ ವರ್ಗದ ಜನರು ಸಹ ಸಮಾಜಕ್ಕೆ ಮುಖ್ಯ. ಆದ್ದರಿಂದ ಎಲ್ಲ ಜಾತಿ, ವರ್ಗದ ಜನರಿಗೂ ಸಮಾನ ಅವಕಾಶ ದೊರೆತಾಗ ಮಾತ್ರ ರಾಷ್ಟ್ರವು ಅಭಿವೃದ್ಧಿ ಹೊಂದುತ್ತದೆ ಎಂಬ ಧೋರಣೆ ಹೊತ್ತವರು.

ಹನೂರರು ಬಾಲ್ಯದಿಂದಲೇ ಎಲ್ಲ ವಿಧವಾದ ಕೆಲಸ ಕಾರ್ಯಗಳನ್ನು ಮಾಡುತ್ತಾ ಬಂದವರು. ಕೃಷಿ, ದನಕರುಗಳನ್ನು ಮೇಯಿಸುವ, ತಂದೆಯ ಬಳಿ ಕೂತು ಕುಮಾರವ್ಯಾಸ ಭಾರತ, ಜೈಮಿನಿ ಭಾರತಗಳನ್ನು ಕೇಳುವ, ಇನ್ನಿತರ ಗೃಹ ಕೆಲಸಗಳಲ್ಲಿ

ಭಾಗಿಯಾಗುತ್ತಾ ಬಂದದ್ದರಿಂದ ಅವರ ಆತ್ಮವಿಶ್ವಾಸ ಹೆಚ್ಚಾಯಿತು. ಇದು ವ್ಯಕ್ತಿತ್ವದ ಮೇಲೂ ಪರಿಣಾಮ ಬೀರಿತು. ಕೌಟುಂಬಿಕ ನೆಲೆಯೊಳಗೆ ಇಂಥಹ ಪರಂಪರೆ ದೊರತದ್ದು ಕೃಷ್ಣಮೂರ್ತಿ ಅವರನ್ನು ಮೇಲು ಸ್ತರಕ್ಕೆ ತಲುಪಲು ಕಾರಣವಾಯಿತು.

ಕೃಷ್ಣಮೂರ್ತಿಅವರನ್ನು ಇಂದು ಹನೂರರು ಎಂದು ಗ್ರಾಮನಾಮದಿಂದ ಗುರುತಿಸುತ್ತೇವೆ. ಅಂದರೆ ಜನಮನದಲ್ಲಿ ಹನೂರರಿಗೆ ದೊರೆತ ಸ್ಥಾನ ಅಪಾರವಾದುದು. ಗ್ರಾಮ ನಾಮವನ್ನು ವ್ಯಕ್ತಿನಾಮವಾಗಿಸಿಕೊಂಡ ಕೆಲವರಲ್ಲಿ ಇವರು ಒಬ್ಬರು. ಉದಾ : ದೇವನೂರ ಮಹದೇವ, ಬೆಸಗರಹಳ್ಳಿ ರಾಮಣ್ಣ, ಹೀಗೆ ತಮ್ಮ ಹೆಸರಿನೊಂದಿಗೆ ಹುಟ್ಟೂರನ್ನು ಸೇರಿಸಿಕೊಂಡು ಗುರುತಿಸಿಕೊಂಡವರು. ಹನೂರರು ಕೇವಲ ಸಾಹಿತ್ಯ ರಚನೆಯನ್ನಷ್ಟೆ ಮಾಡದೆ ನಾಡು-ನುಡಿ ಚಿಂತನೆಯಲ್ಲಿ, ಭಾಷಾ ಸ್ಥಾನಮಾನದ ಹೋರಾಟದಲ್ಲಿ ಪಾಲ್ಗೊಂಡವರು.

ಹನೂರರ ಮೇಲೆ ಕುವೆಂಪು, ಮಾಸ್ತಿ, ಬಿ.ಎಂ.ಶ್ರೀ, ದೇಜಗೌ, ಹಾ.ಮ.ನಾಯಕ್, ಚಿದಾನಂದಮೂರ್ತಿ, ಲಕ್ಷ್ಮಿನಾರಾಯಾಣ ಭಟ್ಟ, ಚಂದ್ರಶೇಖರ ಕಂಬಾರ ರಂತಹ ಪ್ರಭಾವದಿಂದ ನಿವೃತ್ತಿ ಹಂತದಲ್ಲಿ ಬಂದು ನಿಂತಿರುವ ಹನೂರರಿಗೆ ಭರ್ತಿ ಅರವತ್ತು ವರ್ಷ. ೩೭ ವರ್ಷಗಳ ವೃತ್ತಿ ಜೀವನದಲ್ಲಿ ಸಾಕಷ್ಟು ಅನುಭವ ಪಡೆದಿರುವ ಹನೂರರಿಗೆ ಇನ್ನೂ ಸಾಹಿತ್ಯಿಕ ಸೇವೆಯ ಅವಕಾಶ ಇದ್ದು ಸಾಹಿತ್ಯದ ನಿತ್ಯ ಚಟುವಟಿಕೆಗಳು ಸಾಗುತ್ತಿವೆ. ಹಾಗಾಗಿ ಹನೂರ ವ್ಯಕ್ತಿತ್ವ ಅವರ ಕೃತಿಗಳಲ್ಲಿ ಅರಳಿ ನಿಂತಿದೆ. ತಮ್ಮ ಬದುಕಿನ ಪ್ರತಿ ಹಂತವನ್ನು ಅವರು ತಮ್ಮ ಕತೆ-ಕಾದಂಬರಿಗಳಲ್ಲಿ ದಾಖಲಿಸುತ್ತಾ ಹೋಗಿದ್ದಾರೆ. ಮೂಲತಃ ಶಾಂತ ಸ್ವಭಾವದವರಾದ ಹನೂರರು ತಮ್ಮ ಕೃತಿಗಳಲ್ಲಿ ಬದುಕಿನ ಅವಶ್ಯಕ ಬದಲಾವಣೆಗಳನ್ನು ಶಾಂತರೀತಿಯಲ್ಲಿಯೇ ತಿಳಿಸಿದ್ದಾರೆ. ಪರಂಪರೆಯಿಂದ ಬಂದಿರುವ ಮಾನವತಾವಾದವನ್ನು ಒಪ್ಪಿಕೊಂಡು, ಇಂದಿನ ವಾಸ್ತವತೆಯನ್ನು ಅರಿತು ಹೊಸ ಬದುಕನ್ನು ಕಟ್ಟಿಕೊಂಡುವಲ್ಲಿ ಯಶಸ್ವಿಯಾಗಿದ್ದಾರೆ. ಆ ಮೂಲಕವಾಗಿ ಹನೂರರು ತಮ್ಮ ಜೀವನ ದರ್ಶನ ಮತ್ತು ವ್ಯಕ್ತಿತ್ವವನ್ನು ಪ್ರಕಟಪಡಿಸಿದ್ದಾರೆ.

ಒಟ್ಟಾರೆಯಾಗಿ ಹನೂರರು ಸರಳ ಸ್ವಭಾವದ ಸಜ್ಜನ ವ್ಯಕ್ತಿ. ಸುಳ್ಳು, ಮೋಸ, ಕ್ರೂರತೆ ಇರುವವರನ್ನು ಹತ್ತಿರಕ್ಕೆ ತೆಗೆದುಕೊಳ್ಳುವುದಿಲ್ಲ. ಶ್ರಮ ಪಡುವವರನ್ನು ಇಷ್ಟ ಪಡುವ ಹನೂರರು ಅವರಿಗೆ ಪ್ರೋತ್ಸಾಹವನ್ನು ನೀಡುತ್ತಾರೆ. ಪುಸ್ತಕ ಹಿಡಿದು ಕುಳಿತರೆ ಊಟವೂ ಇಲ್ಲ, ಮಾತೂ ಇಲ್ಲ ಎಂಬಂತೆ ಏಕಾಂತದಲ್ಲಿ ಓದಿಗೆ ಶರಣಾಗುತ್ತಾರೆ. ಮನೆಯೂ ಸಹ ಸ್ವಚ್ಛತೆಯಿಂದ ಇದ್ದು ಅವರ ಅಧ್ಯಯನಕ್ಕೆ ಪೂರಕವೆಂಬಂತೆ ನಿರ್ಮಲವಾಗಿದೆ. ಹನೂರರ ಶ್ರೀಮತಿ ಸುಕನ್ಯಾ ಹಾಗೂ ಇಬ್ಬರು ಮಕ್ಕಳು ಸಹ ಅಧ್ಯಯನದಲ್ಲಿ ನಿರತರು ಆಗಿರುವುದರಿಂದ ವೈವಾಹಿಕ ಜೀವನದಲ್ಲೂ ಯಶಸ್ವಿಯಾದವರು. ಹಾಗಾಗಿ ಹನೂರರು ವೈಯಕ್ತಿಕ ಜೀವನ ಮತ್ತು ವೃತ್ತಿ ಜೀವನ ಎರಡರಲ್ಲೂ ಗೆದ್ದವರು. ವೈಯಕ್ತಿಕ ಜೀವನದಲ್ಲಿ ಶಾಂತರಾಗಿ, ಕಡಿಮೆ ಮಾತಿನ ಹನೂರರು ವೃತ್ತಿ ಜೀವನದಲ್ಲಿ ಯಾವುದೇ ವಿಷಯದ ಬಗ್ಗೆ ನಿರರ್ಗಳವಾಗಿ

ಮಾತನಾಡಬಲ್ಲರು. ಆಡುವ ಪ್ರತಿ ಮಾತಿನ ಉಪಯೋಗವಾಗಬೇಕೆಂಬುದು ಇವರ ವಾದ. ಹೀಗಾಗಿ ಹನೂರರು ಬದುಕಿನ ಇತಿ ಮಿತಿಗಳನ್ನರಿತು ಬದುಕನ್ನು ಅರ್ಥಪೂರ್ಣವಾಗಿ ಕಟ್ಟಿಕೊಂಡವರು.

**ಅಡಿಟಿಪ್ಪಣಿ :-**

೧ : ಜಿ.ಆರ್. ತಿಪ್ಪೇಸ್ವಾಮಿ : ಮ್ಯಾಸಬೇಡರ ಬೆನ್ನುಡಿ

೨ : ಜಿ.ಆರ್. ತಿಪ್ಪೇಸ್ವಾಮಿ : ಬಿತ್ತಿಬೆಳೆದವರು : ಪು : ೫೬

೩ : ಅದೇ : ಪು : ೫೬, ೫೭

೪ : ಅದೇ : ಪು : ೫೭

೫ : ಅದೇ : ಪು : ೫೮

೬ : ಅದೇ : ಪು : ೭೦

## ಅಧ್ಯಾಯ – ೪

# ಕೃಷ್ಣಮೂರ್ತಿ ಹನೂರ ಅವರ ಸಣ್ಣಕತೆಗಳು

ಹನೂರರ ಸಾಹಿತ್ಯ ಕೃಷಿಯಲ್ಲಿ ಸಣ್ಣಕತೆಗಳಿಗೆ ಮಹತ್ವದ ಸ್ಥಾನವಿದೆ. ಕಥಾ ರಚನೆಯಲ್ಲೂ ಹನೂರರು ಪ್ರಮುಖವಾದ ಸ್ಥಾನ. ಒಟ್ಟು ಮೂರು ಕಥಾಸಂಕಲನಗಳನ್ನು ರಚಿಸಿದ್ದಾರೆ. ತಮ್ಮ ಕತೆಗಳಲ್ಲಿ ಬದುಕನ್ನು ನೋಡುವ ದೃಷ್ಟಿಕೋನ ವಿಶಿಷ್ಟ ರೀತಿಯಾಗಿದೆ. ತಮಗಾದ ಕ್ಷೇತ್ರ ಕಾರ್ಯದ ಅನುಭವ, ತಾವು ಕಂಡ ವ್ಯಕ್ತಿಗಳನ್ನೆ ಒಂದುಗೊಡಿಸಿ ಕತೆಗಳನ್ನು ಹೆಣೆದಿದ್ದಾರೆ. ಪ್ರತಿಯೊಂದು ಕತೆಯು ಹೊಸತನದಿಂದ ಕೂಡಿವೆ. ಪಾತ್ರಗಳು, ಸನ್ನಿವೇಶಗಳು, ಹಾಗೂ ಸಮಾಜ ಈ ಮೂರು ಪರಸ್ಪರ ಒಂದನ್ನೊಂದು ಅವಲಂಬಿಸಿಯೇ ಕತೆಗಳು ಸಾಗುತ್ತವೆ. ಮೂರು ಕಥಾ ಸಂಕಲನಗಳಿಂದ ಒಟ್ಟು ೨೭ ಕತೆಗಳಿದ್ದು, ಮೂರು ಕಥಾಸಂಕಲನಗಳನ್ನು ಪ್ರತ್ಯೇಕವಾಗಿ ಅಧ್ಯಯನಕ್ಕೆ ಒಳಪಡಿಸಿದ್ದೇನೆ.

ಹನೂರರ ಪ್ರತಿಯೊಂದು ಕತೆಯ ಸಾಮಾಜಿಕ ಪ್ರಜ್ಞೆ, ಜಾನಪದೀಯ ಅಂಶ, ಬುಡಕಟ್ಟಿನ ಬದುಕು ಎಂಬ ಮೂರು ಹಿನ್ನೆಲೆಯಲ್ಲಿ ಗುರುತಿಸುವ ಪ್ರಯತ್ನ ನಿಬಂಧದಲ್ಲಿ ಕಂಡು ಬರುತ್ತದೆ. ಮೂರು ಕಥಾಸಂಕಲನಗಳೆಂದರೆ

೧) ಕೇರಿಗೆ ಬಂದ ಹೋರಿ
೨) ಕತ್ತಲಲ್ಲಿ ಕಂಡ ಮುಖ
೩) ಕಳೆದ ಮಂಗಳವಾರ ಮುಸ್ಸಂಜೆ.

**ಕೇರಿಗೆ ಬಂದ ಹೋರಿ :–**

ಇದು ಕೃಷ್ಣಮೂರ್ತಿ ಹನೂರರ ಪ್ರಥಮ ಕಥಾ ಸಂಕಲನವಾಗಿದೆ. ಇದರಲ್ಲಿ 'ಬಿದ್ದ ಶಿಕಾರಿ', 'ಕುಂಡಜ್ಜನ ಪರ್ಸಂಗ', ಕೇರಿಗೆ ಬಂದ ಹೋರಿ', 'ಮಾದೇವಿ ಊರು ಬಿಟ್ಟಳು', 'ಕೈ ತಪ್ಪಿದ ಕುರಿ', 'ದ್ಯಾಮವ್ವನ ಗೃಹ ಕಲಹ', 'ಮುಖ' ಮತ್ತು 'ವರ್ಗಾವಣೆ' ಗಳೆಂಬ ಎಂಟು ಕತೆಗಳಿವೆ. ಒಟ್ಟು ಎಂಟು ಕತೆಗಳಲ್ಲೂ ವಸ್ತು, ಭಾಷೆ, ಮತ್ತು ನಿರೂಪಣೆಗಳು ವಿಭೀನ್ನತೆಗಳಿಂದ ಕೂಡಿವೆ. ಇವು ಹನೂರರ ಆರಂಭದ ಕತೆಗಳಾದರೂ ಅನುಭವದ ನೈಜತೆ ತೆರೆದುಕೊಂಡಿದೆ.

**'ಬಿದ್ದ ಶಿಕಾರಿ':–**

ಈ ಕತೆ ಮಲೆಯ ಮಹದೇಶ್ವರನ ಅರಣ್ಯ ಪ್ರದೇಶದ ಬುಡಕಟ್ಟು ವಾಸಿಗಳಾದ ಕಾಡುಕುರುಬರುಗುಳೇ ಹೊರಟ ಹಿನ್ನಲೆಯ ಕತೆ. ಇಲ್ಲಿ ಜಡೇಮಾದಯ್ಯನ ಸುತ್ತಲೂ ಕತೆ ಹೆಣೆದುಕೊಂಡಿದೆ. ಮುಖ್ಯವಾಗಿ ಕತೆಗಾರರು ಅಲ್ಲಿನ ಅರಣ್ಯ ವಾಸ್ತವ ಸಂಗತಿ ಹೇಳುವುದು, ಮತ್ತು ಬುಟಕಟ್ಟು ಜನರ ಜೀವನ, ನಂಬಿಕೆಗಳನ್ನು ತಿಳಿಸುವುದೇ ಆಗಿದೆ. ಕತೆಯೊಳಗೆ ಕತೆ ಹೇಳುವ ಸಂಶೋಧನೆ ಕೈಗೊಳ್ಳುವ ಹನೂರರು ಬಿಲ್ಲಯ್ಯ ಸ್ವಾಮಿಯ ಕತೆಯನ್ನು, ಕಾಡುಕುರುಬರು ವಾಸಸ್ಥಳವಾದ ಹೆಗ್ಗಜ್ಜಿ ಪೋಡು ಎಂಬ ಸ್ಥಳನಾಮದ ಮೂಲವನ್ನು ತಿಳಿಸಿದ್ದಾರೆ.

ಹೆಗ್ಗಜ್ಜೆ ಪೋಡಿನ ಜನರಿಗೆ 'ಬಿಲ್ಲಯ್ಯ ಸ್ವಾಮಿ' ಯೇ ದೇವರು ಈತ ಹೆಗ್ಗಜ್ಜೆ ಪೋಡಿಗೆ ಆದಿ ಪುರುಷ, ಬೇಟೆಯಾಡಿದ ಫಲವಾಗಿ ಶಾಪಗ್ರಸ್ಥನಾದ ಬಿಲ್ಲಯ್ಯ "ಮಕ್ಕಳೇ ಮರದ ಮೇಲಣ ನೂರರು ಹೂ ಮರಿಗಳನ್ನು ತಾಯಿ ಪಕ್ಷಿಯಿಂದ ಬೇರೆ ಮಾಡಿದ್ದಕ್ಕೊ ವ್ಯಾಘ್ರ, ಗಜರಾಜರ, ಜಿಂಕೆ ಮರಿಗಳ ಕೊಂದ ಪಾಪಕ್ಕೆ ನನಗೆ ಹೀಗಾದದ್ದು ಸರಿ. ಇಲ್ಲೆ ಬಿದ್ದು ಮುಂದಿನ ಕಾಲವನ್ನು ಧ್ಯಾನದಲ್ಲಿ ಕಳೆಯುವೆ. ಕಡೆಯದಾಗಿ ನಿಮಗೊಂದು ನುಡಿ ; ಕಾಡಿನಲ್ಲಿ ಮೇಯುತ್ತಾ ಅಲೆಯುವ ತಾಯಿ ಮಕ್ಕಳ ಯಾವ ಸಂಸಾರದ ಮೇಲೂ ಬಿಲ್ಲೆತ್ತವೇಡಿ, ಗಿಡವೂ, ಮರವೂ ಹಕ್ಕಿಗಳು ಪಕ್ಷಿಗಳು ನಿಮ್ಮ ಮಕ್ಕಳು ದಿನವೆಲ್ಲಾ ಬೇಸಾಯ ದುಡಿದು ಉಣ್ಣಿ"[೧] ಮೇಲಿನ ಹೇಳಿಕೆ ಜನಪದದ ಒಂದು ಐತಿಹ್ಯ. ಇದು ಸತ್ಯವೋ, ಸುಳ್ಳೋ ಅದು ಒಂದು ನಂಬಿಕೆಯಾಗಿ ಕಾಡುಕುರುಬರ ಜೀವನದ ದಿಕ್ಕನ್ನೇ ಬದಲಿಸಿದೆ. ಈ ಕತೆಯುಳ್ಳ ಕಥನ ಗೀತಿಯನ್ನು ಜಡೇ ಮಾದಯ್ಯ ಹಡಿ ಜಿನವಾದ ಪರಿಸರ ಪ್ರೇಮಿ ಎನಿಸಿದ್ದಾನೆ. ಹನೂರರು ಪರಿಸರದ ಮತ್ತು ಕಾಡು ಪ್ರಾಣಿಗಳ ಪರವಾದ ಒಂದು ಚಿಂತನೆಯನ್ನು ಉತ್ತಮ ನಿರೂಪಣೆಯಿಂದ ಕಟ್ಟಿದ್ದಾರೆ.

ಬಿಲ್ಲಯ್ಯ ಸ್ವಾವಿಯ ಅಪ್ಪಣೆಯಂತೆ ನಡೆವ ಕಾಡುಕುರುಬರು ಹಾದಿಗೆ ಮುಳ್ಳಾದವರು ನಾಡ ಸೀಮೆಯ ಜನ. ಕಾಡಿನಲ್ಲಿದ್ದರೂ ಏನೂ ಅರಿಯದ ಜಡೇಮಾದಯ್ಯ ಆನೆಗಳನ್ನು ಭೇಟೆಗಾರರಿಗೆ ತೋರಿಸಿ ಬಿಲ್ಲಯ್ಯಸ್ವಾವಿಯ ಅಪ್ಪಣೆಗೆ ಅನರ್ಹವಾದ "ಅಯ್ಯಯೋ ಬುದ್ಯೋ, ಬುದ್ಯೋ ನಮ್ ವನರಾಜರ ಮೌಲ್ಯ ತುಪಾಕಿ ಎತ್‌ಬ್ಯಾಡ್ರಿ ಬಿಲ್ಲಯ್ ನಾಣುಗು" ಎಂದು ಹೇಳುವ ಹನೂರರ ಪಾತ್ರ ಒಂದು ಸಾಮಾಜಿಕ ಚಿಂತನೆಗೆ ತಳ್ಳುತ್ತದೆ. ಜನಪದದ ಎಷ್ಟೋ ನಂಬಿಕೆಗಳು, ಆಚರಣೆಗಳು, ಸಮಾಜವನ್ನು ಉಳಿಸಿ ಬೆಳೆಸುವ ಹೊಣೆ ಹೊತ್ತಿದೆ. ಬುಡಕಟ್ಟು ಜನಾಂಗಗಳು ಕಾಡು ವಾಸಿಗಳಾದರೂ ಸಹ ಅವರಿಗಿರುವ ಪರಿಸರ ಪ್ರೇಮ ನಾಡಿನ ಜನಕ್ಕೆ ಕಿಂಚಿತ್ತಾದರೂ ಬಂದರೆ ಮುಂದಿನ ಪೀಳಿಗೆಯ ಬದುಕು ಹಸನಾಗುತ್ತದೆ. ವನಕಾಯುವ ಅರಕ್ಷಕರ ಅಪ್ರಾಮಾಣಿಕ ಕೆಲಸದ ವಾಸ್ತವ ಸ್ಥಿತಿ ಕಣ್ಣ ಮುಂದೆ ಬಂದಾಗ ಬೇಸರವೆನಿಸುತ್ತದೆ. ಜಡೆಮಾದಯ್ಯನನ್ನು ಹಿಡಿದು ಎಳೆದೂಯ್ಯುವ ಅರಕ್ಷಕರು ನಾಲ್ಕು ಕಲ್ಲಿಗೆ ಹೆದರಿ ಓಡುವ ಸ್ಥಿತಿ ಪ್ರಸ್ತುತ ಅರಣ್ಯ ರಕ್ಷಕ ಜೀವಂತಿಕೆಯ ಚಿತ್ರಣವಾಗಿದೆ. ಇಂತಹ ಜಂಜಾಟಗಳಿಗೆ ಹೆಗ್ಗಜ್ಜೆ ಪೋಡಿನ ಜನ ಬಯಲು ಸೀಮೆಯ ಕಡೆ ಹೆಜ್ಜೆ ಹಾಕುತ್ತಾ ಕತೆ ಮುಕ್ತಾಯವಾಗುತ್ತದೆ.

ಹನೂರರು ಹೆಗ್ಗಜ್ಜೆ ಪೋಡಿನ ಸ್ಥಳನಾಮದ ಸಂಶೋಧನೆಯನ್ನು ಸೂಚ್ಯವಾಗಿ ಮೊದಲೇ ತಿಳಿಸಿದ್ದಾರೆ. ಹೆಗ್ಗಜ್ಜೆ ಎಂದರೆ ಹಿರಿದಾದ ಕಜ್ಜೆ. ಪೋಡು ಎಂದರೆ ಕತ್ತರಿಸುವವ ಎಂದರ್ಥ ಕೊಡುತ್ತವೆ. ವಾಸ್ತವವಾಗಿ ಸ್ಥಳನಾಮಗಳು ಒಂದು ಹಿನ್ನೆಲೆ ಹೊತ್ತುಕೊಂಡು ಸೃಷ್ಟಿಯಾಗುತ್ತವೆ ಎಂಬುದಕ್ಕೆ ಇದೇ ಉದಾಹರಣೆ. ಒಟ್ಟಾರೆ ಈ ಕತೆಯು ಮನುಷ್ಯನ ನಡವಳಿಕೆ ಹಾಗೂ ಅರಣ್ಯ ನಾಶದ ಬಗ್ಗೆ ಎಚ್ಚರಿಸುವ ಕತೆಯಾಗಿದೆ.

**ಕುಂಡಜ್ಜನ ಪರ್ಸಂಗ : –**

ಜನಪದರ ಜೀವನವನ್ನು ಒಂದು ಅನುಭವದ ತೆಕ್ಕೆಗೆ ತಂದು ತಾಜಾತನದಲ್ಲಿ ಕತೆಗಳನ್ನು ಹಿಡಿದಿಡುವ ಪ್ರಯತ್ನ ಈ ಕತೆಯಲ್ಲಿ ಹೆಚ್ಚು ಕಂಡುಬರುತ್ತದೆ. ಕುಂಡಜ್ಜ ಒಬ್ಬ ಬದುಕಿನ ವಾಸ್ತವವನ್ನು ನೇರವಾಗಿ ಹೇಳುವ ನಿರೂಪಕನಾಗಿ ಕಾಣುತ್ತಾನೆ. ಹನೂರರು ಕುಂಡಜ್ಜನ ಪಾತ್ರದ ಮೂಲಕ ಜನಪದರ ವೈಯಕ್ತಿಕ ಘಟನೆಗಳನ್ನು ಸೂಕ್ಷ್ಮತೆಯ ಒಳಸುಳಿಗಳೊಂದಿಗೆ ಚಿತ್ರಿಸಿದ್ದಾರೆ. ಕುಂಡಜ್ಜ ಉತ್ತಮ ಕತೆಗಾರನಾಗಿ ಎಲ್ಲದಕ್ಕು ಪರ್ಸಂಗ ಹೇಳಿ ನಗುವಿನೊಂದಿಗೆ ಮುಕ್ತಾಯ ಮಾಡುತ್ತಾನೆ. ಕತೆಯು ಪೂರ್ಣ ಕುಂಡಜ್ಜನ ವ್ಯಂಗ್ಯದ ಮಾತುಗಳಿಂದಲೇ ಸಾಗುತ್ತದೆ. ಒಬ್ಬ ನಿಜವಾದ ಓದುಗಾರನಿಗೆ ನಗು ಬರುವುದೇ ಇಲ್ಲ. ಕುಂಡಜ್ಜ ಆಡುವ ಮಾತು" ಮಂಡಿಯ ಮೇಲೆ ರೂಪಾಯಗಲದ ವ್ರಣವದ್ದು, "ಇದ್ದೇನ್ ಕುಂಡಜ್ಜ ಮಂಡಿಮ್ಯಾಲೆ?' ಅಂದರೆ, "ಅಯ್ಯ ರೂಪಾಯಿ ಬುದ್ದಿ, ಜೇಬಿಲ್ಲ, ಜೇಬಿರ ಅಂಥ ಸರ್ಟಿಲ್ಲ, ಅದರಿಂದ ರೂಪಾಯ್ನ ಮಂಡಿಮ್ಯಾಲೆ ಮಡಿಕಂಡಿವ್ನಿ"[೨] ಎಂಬ ಬಡತನದ ಪರಿಸ್ಥಿತಿಯನ್ನು ನಗುವಿನೊಳಗೆ ಸೇರಿಸಿ ವ್ಯಂಗ್ಯ ಮಾಡುವ ಕುಂಡಜ್ಜನು ಒಬ್ಬ ಹಾಸ್ಯಕಾರನಾಗಿ ಕಾಣುವುದು ಸಹಜ.

ಬಡತನದ ಒಳಸುಳಿಯಲ್ಲೆ ಸುತ್ತುವ ಕುಂಡಜ್ಜ ಒಬ್ಬ ಕುರುಡ ತನ್ನ ಬದುಕಿನ ನೋವನ್ನೆಲ್ಲ ಮರೆಮಾಚಿ ಸಾಹಸ ಕಥೆಗಳನ್ನು ಮಕ್ಕಳಿಗೆ ಹೇಳುವ ಕುಂಡಜ್ಜ ಸಮಾಜದ ವಾಸ್ತವತೆಯನ್ನು ಬದಲಾವಣೆ ಮಾಡಲು ಮಕ್ಕಳಲ್ಲಿ ಸ್ಪೂರ್ತಿ ತುಂಬುತ್ತಾನೆ. ಮುದ್ದೆಗಾಗಿ ನಾಯಿಯೊಡನೆ ಹೋರಾಡುವ ತನ್ನ ಮೊಮ್ಮಕ್ಕಳಲ್ಲಿ ಅಂತ ಬದಲಾವಣೆ ವ್ಯಕ್ತವಾಗಿದೆ. ಹಸಿವು ನೀಗಲು ಪಡುತ್ತಿದ ಅಂದಿನ ಸ್ಥಿತಿಯ ಜೀವಂತ ಚಿತ್ರಣ ತಮ್ಮಣ್ಣನ ಪಾತ್ರದಲ್ಲಿ ವ್ಯಕ್ತವಾಗಿದೆ. "ಲೇ ಹೈಕ್ಳಾ, ಯಾವನು ಆ ಕಲ್ನ ಒಬ್ನೆ ತೂಕಿ ಮ್ಯಾಲೆ ಬಿಸಾಕಿನೊ ಅವುನ್ಗೀವತ್ತು ಉಣ್ಣಕ್ಕೆ ಒಂದು ರಾಗಿ ಮುದ್ದೆ, ಹಿಡಿಯನ್ನ ಜಾಸ್ತಿ"[೩] ಹೀಗೆ ಹಸಿವೆಯು ಶೋಷಣೆಯ ಅಸ್ತ್ರವಾಗಿ ತಮ್ಮಣನ ಸಾವಿಗೆ ಕಾರಣವಾಗುತ್ತದೆ.

ಪರ್ಸಂಗವೇ ಹೆಚ್ಚಾಗಿರುವ ಈ ಕತೆಯು ಜಾನಪದದ ಒಂದು ಕೂಸು. ಹನೂರರು ಸಮಾಜದೊಳಗಿರುವ ಅಸಮಾನತೆ, ಮೇಲು–ಕೀಳು, ಪಲಾಯನವಾದಿ ಗುಣಗಳನ್ನು ಉದ್ದೇಶವಾಗಿಟ್ಟುಕೊಂಡು ಕತೆ ಹೆಣೆದಿದ್ದಾರೆ, ಹುಟ್ಟು ದುಃಖ, ಸಾವೇ ಸುಖ ಎಂಬ ಮಾತು ಕುಂಡಜ್ಜನ ಬಾಯಲ್ಲಿ ಪ್ರತಿಹಂತದಲ್ಲೂ ವ್ಯಕ್ತವಾಗುವತ್ತದೆ. ಕತೆಯ ಪೂರ ಬದಕಿನ ನಾನಾ ಕೊರತೆಗಳನ್ನು ಹೇಳುತ್ತಲೇ ಹೋಗುವ ಹನೂರರು ಕೊನೆಯಲ್ಲಿ ಕುಂಡಜ್ಜ, ಮೊಮ್ಮಕ್ಕಳು ನಗುವಿನಲ್ಲಿ ಬದುಕಿನ ಉತ್ಸಾಹ ತೋರುತ್ತಾರೆ.

'ಹಸಿವು' ಮನುಷ್ಯನನ್ನು ಕಾಡಿದಾಗ ಮಾತ್ರ ಅರಿವು ಮೂಡಲು ಸಾಧ್ಯ. ಹಸಿವಿನ ಅನುಭವವಿಲ್ಲದೆ ಯಾವುದೇ ಮನುಷ್ಯ ಸಮಾಜದ ಕಷ್ಟದಲ್ಲಿ ಭಾಗಿಯಾಗಲಾರ. ಹನೂರರು ಈ ಕತೆ ಬರೆದ ಕಾಲದಲ್ಲಿದ್ದ ಹಸಿವಿನ ಕೊರತೆ ಇಂದಿಗೂ ನಾನಾ ಕ್ರೂರ ಕಾರ್ಯಗಳಿಗೆ ಎಡೆ ಮಾಡುತ್ತಲೇ ಇದೆ. ಶಾಂತ

ನಿರೂಪಣೆಯಿಂದಲೇ ಪ್ರತಿಭಟಿಸುವ ಹನೂರರ ಕತೆಗಳು ವಿಭಿನ್ನವಾಗಿ ನಿಲ್ಲುತ್ತವೆ. ಒಟ್ಟಿನಲ್ಲಿ ಈ ಕತೆ ಶೋಷಣೆಯ ವಿಭಿನ್ನ ಮಾರ್ಗವನ್ನು ತೆರೆದಿಡುತ್ತದೆ.

**ಕೇರಿಗೆ ಬಂದ ಹೋರಿ : –**

ಒಂದು ಸಮಾಜದೊಳಗಿರುವ ಅನ್ಯೆತಿಕ ಸಂಭಂಧ, ಬಡತನ, ಮತ್ತು ಮೇಲು-ಕೀಳಿನ ತಾರತಮ್ಯವನ್ನು ತಿಳಿಸುವ ಕತೆಯೇ ಕೇರಿಗೆ ಬಂದ ಹೋರಿ. ಈ ಕತೆಯಲ್ಲಿ ಬರುವ ನಿಂಬರಾಯಪ್ಪ ಶ್ರೀಮಂತನಾದರೂ ತನ್ನ ಮಡದಿ ಸತ್ತಿದ್ದಾಳೆ, ಮಗ ಸಣ್ಣರಾಯಿ ಜೈಲು ಸೇರಿದ್ದಾನೆ. ಆದರೂ ಸತ್ತ ಹೋರಿಗೆ ಚೌಕಾಸಿ ನಡೆಸುವ ಅವನ ಅತಿ ಆಸೆ ಒಂದು ಕಡೆ, ಕರಗಯ್ಯ, ದಾಸಣ್ಣ ಹದಿನೆಂಟು(ರೂ) ಎಂದು ಮೇಲೇರಲಾಗದೆ ಹಸಿವು ತೊಲಗಿಸುವ ಆಸೆ ಒಂದೆಡೆ. ಹನೂರರು ಸತ್ತ ಹೋರಿಯ ಸುತ್ತಲೂ ಕತೆ ಹೆಣೆಯುತ್ತಲೇ ವಾಸ್ತವ ಮತ್ತು ಅವಾಸ್ತವಗಳ ಬಗ್ಗೆ ತಿಳಸುತ್ತಾರೆ. ಸಾವು ಮನುಷ್ಯನ ಅಂತ್ಯ, ಅಲ್ಲಿಯವರೆಗೆ ನಾಮ, ಕುಲ, ಮೇಲು-ಕೀಳು, ಮನುಷ್ಯ ಸತ್ತರೆ ಹೆಣ ಅಷ್ಟೇ ಆದರೆ ಹೋರಿ ಸತ್ತರೂ ಬೆಲೆಯಾಗುತ್ತದೆ. ಅದೂ ಆಹಾರವಾಗಿ ಒಂದು ದಿನವಾದರೂ ಹಸಿವು ನೀಗಿಸಬಲ್ಲದು. ನರ ಮನುಷ್ಯ ಬಾಳು ಹುಟ್ಟಿದಾಗಲೇ ದುಃಖ ಸತ್ತ ಮೇಲೆಯೇ ಸುಖ.

ಹನೂರರು ಈ ವ್ಯತ್ಯಾಸಗಳನ್ನು ಹೇಳುತ್ತಲೆ ಹೊಂದಾಣಿಕೆಯ ಕೊರತೆಯನ್ನು ತಿಳಿಸುತ್ತಾರೆ. ನಿಂಗಯ್ಯ, ಕರುಗಪ್ಪ, ದಾಸಣ್ಣ, ಪುಟ್ಟಯ್ಯ, ಅಣ್ಣತಮ್ಮಂದಿರಾದರೂ ಇವರ ಸಂಸಾರಗಳಲ್ಲಿ ಸಮನ್ವಯ ಬದುಕು ಕಡಿಮೆ. ಪ್ರಸ್ತುತ ಸಮಾಜದಲ್ಲಿ ಈ ಹೊಂದಾಣಿಕೆ ಸಮಸ್ಯೆ ಮಧ್ಯಮ ವರ್ಗ ಹಾಗೂ ಬಡತನದ ಕುಟುಂಬದಲ್ಲಿ ನಿತ್ಯಸತ್ಯ. ಜನಪದರ ಬದುಕಿನಲ್ಲಿ ಅನ್ಯೆತಿಕತೆಗೆ ಒಂದು ಶುದ್ದತೆ ಇದೆ. ಸಣ್ಣರಾಯಿ , ಕೆಂಪಿಯ ಅನ್ಯೆತಿಕ ಸಂಬಂಧ ಭದ್ರವಾಗಿರುವ ಕೆಂಪಿಯ ಆಸೆಗೆ "ಸಣ್ಣರಾಯಿ ಮಾನಹೋಗುವ ಆ ಒಂದು ವಚಾರ ಬಿಟ್ಟುಬಿಡು, ಅದರ ಬದಲು ಪ್ರಾಣಕೇಳು ಅಂದುಬಿಟ್ಟ"[೪] ಗಂಡು ಹೆಣ್ಣು ಕೊಡುವ ಆಸೆಗೆ ಬರದ ಜಾತಿ, ಮಾನ, ಲಗ್ನವಾಗಿ ಬಾಳು ಕೊಡುವಾಗ ಬಂದು ನಿಲ್ಲುವುದೆಲ್ಲಿ.

ಅನಾದಕಾಲದಿಂದಲೂ ಕೆಳಜನಾಂಗದ ಹೆಣ್ಣಿನ ಮೇಲೆ ನಡೆಯುತ್ತಿರುವ ದೌರ್ಜನ್ಯವನ್ನು ಅವರೇ ಸರಿಪಡಿಸಿಕೊಳ್ಳಬೇಕು. ಆದರೆ ಹನೂರರು ಕಂಪಿ ಪಾತ್ರದಲ್ಲಿ ಪ್ರತಿಭಟನೆಯ ಮಾತನ್ನು ತರುವುದೇ ಇಲ್ಲ. ಇಲ್ಲಿ ಅಸಹಾಯಕಳಾಗಿದ್ದಾಳೆ. ಸಮಸ್ಯೆಯನ್ನು ಎದುರಿಸಲಾರದಷ್ಟು ಬಲಹೀನಳಾಗಿ ಕಾಣುತ್ತಾಳೆ. ತನ್ನ ಸಣ್ಣರಾಯಿ ಸಂಭಂಧ ಎಂದೂ ಮುಗಿಯದ್ದು ಅದು ಊರಿಗೆಲ್ಲಾ ಗೊತ್ತು, ನಾ ಲಗ್ನ ಆಗದೇ ಸಣ್ಣರಾಯಪ್ನ ಎಂಬ ಆಸೆ ಮನದಲ್ಲಿಯೇ ಉಳಿದಿದೆ. ತನ್ನ ಗಂಡನ್ನ ಗುಂಡು ಹಾರಿ ಕೊಂದರು. ಇಲ್ಲಿ ಕೆಂಪಿ ಅದನ್ನು ಮರೆಮಾಚಿ ಮುಂದಿನ ಬದುಕಿನೆಡೆಗೆ ಮುಖ ಮಾಡಿ ನಿಲ್ಲುತ್ತಾಳೆ. ಒಳ ಸಂಭಂಧವು ಬದುಕಿಗೊಂದು ಆಸರೆ ನೀಡಬಲ್ಲದೇ, ಗ್ರಾಮೀಣರ, ಜೀವನದಲ್ಲಿ ಇಂತಹ ಎಷ್ಟೋ ಸಂಭಂಧಗಳು ಇಂದಿಗೂ ಹಸಿರು ಪಡೆದಿರುವುದುಂಟು.

ಆದರೆ ಹನೂರರು ಈ ಕತೆಯ ಒಳಗೆ ಒಳ ಸಂಭಂಧವನ್ನು ಅನೈತಿಕ ಸಂಭಂಧ ಅಥವಾ ಕೀಳು ಸಂಭಂಧ ಎಂದು ಹೇಳುವ ಪ್ರಯತ್ನ ಮಾಡಿಲ್ಲ.

ಸಣ್ಣರಾಯಿ ಮತ್ತು ಕೆಂಪಿಯ ಸಂಬಂಧವು ಒಂದು ಶುದ್ಧ ಪ್ರೇಮವಾಗಿ ಕಂಡುಬರುತ್ತದೆ. ಆದರೆ ಇವರ ಈ ಶುದ್ಧ ಪ್ರೇಮಕ್ಕೆ ಸಮಾಜ ಬೆಲೆಕೊಡುವುದಿಲ್ಲ ಜಾತಿ ಅಡ್ಡ ಬಂದು ನಿಂತಾಗ ಸಣ್ಣರಾಯಿ ಎದುರುತ್ತಾನೆ. ಆದರೆ ಕೆಂಪಿಗೆ ಅದು ಎಲ್ಲರಿಗೊ ತಿಳಿಯಲಿ ಎಂಬ ಆಸೆ. ತಾನು ಮಾಡಿದ್ದು ಮೇಲು ಸಂಭಂಧ ಎಂಬ ಹೆಮ್ಮೆ ಅವಳಲ್ಲಿದೆ. ಸಮಾಜದೊಳಗೆ ಮನುಷ್ಯ ಎತ್ತರದ ಕಡೆಗೆ ಸಾಗುತ್ತಾನೆ. ಸಂಭಂಧಗಳು ಇದಕ್ಕೆ ಹೊರತಾಗಿಲ್ಲ. ಹನೂರರು ಇಂತಹ ವ್ಯತ್ಯಾಸಗಳನ್ನು ಕಂಡು ಸಮಾಜದೊಳಗಿನ ಇಂತಹ ತಾರತಮ್ಯ ಹೋಗಲಾಡಿಸಬೇಕು. ಸುಖ ಬಾಳಿನ ಸೂತ್ರಕ್ಕೆ ಜಾತಿ, ಅಂತಸ್ತು ಅಡ್ಡ ಬರಬಾರದು ಎಂಬ ಸಂದೇಶವನ್ನು ತಿಳಿಸಿದ್ದಾರೆ. ಒಟ್ಟಾರೆಯಾಗಿ ಬಡತನದ ಜೀವಂತ ಚಿತ್ರಣವನ್ನು ನೀಡಿ ಆತ್ಮ ವಿಮರ್ಶೆಗೆ ಒಳಪಡಿಸುವ ಕತೆಯಾಗಿದೆ.

**ಮಾದೇವಿ ಊರು ಬಿಟ್ಟಳು : -**

ಒಂದು ಹೆಣ್ಣಿನ ವೈವಾಹಿಕ ಜೀವನದ ಸುತ್ತಲೂ ಹೆಣಿದಿರುವ ಕತೆ ಇದು. ಹನೂರರು ತಮ್ಮ ಕತೆಗಳಲ್ಲಿ ಹೆಚ್ಚು ಹೆಣ್ಣಿನ ಜೀವನದ ಸಮಸ್ಯೆಗಳನ್ನೆ ಸೂಚಿಸುತ್ತಾರೆ. ಇಲ್ಲಿ ಮಾದೇವಿಯ ಪಾತ್ರ ಹಿಂದೂ ಸಂಸ್ಕೃತಿಗೆ ವಿರುದ್ದವಾಗಿಯೂ, ಮಾನವೀಯ ಸಂಸ್ಕೃತಿಯ ಪರವಾಗಿಯೂ ಕಂಡುಬರುತ್ತದೆ. ಹಿಂದೂ ಸಂಸ್ಕೃತಿಯಲ್ಲಿ ವಿಧವಾ ವಿವಾಹಕ್ಕೆ ಪ್ರಾಶಸ್ತ್ಯವಿಲ್ಲಲ. ಹೆಣ್ಣು ಗಂಡ ಸತ್ತರೆ ಸ್ವಾತಂತ್ರ ಸಿಗುವುದೇ ಇಲ್ಲ. ಆದರೆ ಹನೂರರು ಇಂತಹ ಮೌಢ್ಯ, ಶೋಷಣೆಯ ವಿರುದ್ದ ಶಾಂತವಾಗಿ ಪ್ರತಿಭಟಿಸಿದ್ದಾರೆ. ವ್ಯಕ್ತಿ ಸ್ವಾತಂತ್ರವು ಹೆಣ್ಣು, ಗಂಡಿಗೆ ಸಮಾನವಾಗಿರಬೇಕು. ಹನೂರರು ಕತೆಗಳನ್ನು ಬರೆದ ಕಾಲಕ್ಕೆ ಹೆಣ್ಣು ಪ್ರತಿಭಟಿಸುವ ಪ್ರಾರಂಭದ ಹಂತದಲ್ಲಿದ್ದಳು, ಹಾಗಾಗಿ ಮಾದೇವಿ ತನ್ನ ಮೇಲೆ ವ್ಯಾಮೋಹಕ್ಕೊಳಗಾಗಿ ಸ್ವಾರ್ಥಕ್ಕೆ ಇವಳನ್ನು ಬಳಸಿಕೊಳ್ಳುವ ಪ್ರಯತ್ನದ ವಿರುದ್ದ ಸಿಡಿದು ನಿಲ್ಲುತ್ತಾಳೆ.

ಹನೂರರು ಕತೆಯ ನಿರೂಪಕರಾಗಿಯೂ, ಒಂದು ಪಾತ್ರವಾಗಿಯೂ ತಮ್ಮ ಬದುಕಿನ ಅನುಭವದ, ತಮ್ಮ ಸಹಪಾಠಿ ವರ್ಗದ ಬದುಕನ್ನೆ ಕತೆಯ ವಸ್ತುವಾಗಿಸಿದ್ದಾರೆ. ಅಂದಿನ ಗ್ರಾಮ ರಾಜಕೀಯಗಳ ಷಡ್ಯಂತ್ರಗಳನ್ನು ತಿಳಿದಿರುವ ಹನೂರರು ಕತೆಗಳಲ್ಲಿ ಉತ್ತರ ಕಂಡುಕೊಳ್ಳುವ ಪ್ರಯತ್ನ ಮಾಡಿದ್ದಾರೆ.

ಊರ ಹಿರೀಕರ ಮಗನಾದ ವಿರೂಪಾಕ್ಷ ಮಾದೇವಿಯನ್ನು ಮದುವೆಯಾಗುವೆನೆಂದು ಪಟ್ಟಣಕ್ಕೆ ಕರೆದೂಯ್ದು ಮೋಸ ಮಾಡುತ್ತಾನೆ. ಆದರೂ ಮಾದೇವಿ "ಏನಾದರಾಗಲಿ ನನ್ನನ್ನು ನಂಬಿಕೊಂಡಿದ್ದರೆ ಹಾಳಾಗುತ್ತಿದ್ದ. ಇಷ್ಟು ಹೊತ್ತಿಗೆ ಪೇಟೆಯಲ್ಲಿ ಕೂಲಿ ಮಾಡಿ ನನ್ನ ಸಾಕಬೇಕಿತ್ತು. ಸಿರಿವಂತರ ಮನೆಯವರನ್ನು ಕರೆದುಕೊಂಡು ಹೋಗಿ ಪೇಟೆಯಲ್ಲಿ ಕೂಲಿ ಮಾಡಿಸುತ್ತಿದ್ದಾಳೆಂಬ ಮಾತು ತಪ್ಪಿತು. ಇನ್ನೂ ವಿರೂಪಾಕ್ಷ ಚೆನ್ನಾಗಿರುತ್ತಾನೆ."[೨] ಹೀಗೆ ತನಗೆ ಮೋಸ ಮಾಡಿದವನ ಮೇಲೆ ಕರುಣೆ ತೋರುವ ಮಾದೇವಿ ಸಮಾಜದ ಕಣ್ಣಿಗೆ ಕೆಟ್ಟು ಹೋದವಳು. ಆದರೆ

ವಿರೂಪಾಕ್ಷ ಮಾದೇವಿ ಜೊತೆ ಸಂಭಂಧ ಹೊಂದಿದ ಮೇಲೂ “ಲೇ ಇರಪಕ್ಸಿ ಕಂಡ ಹುಡಿಗೇರಿಂದ ಇನ್ನಷ್ಟ ದಿನ ಸುತ್ತೇಕು ಅಂದ್ಕಂಡೀಯಲೇ ನಡಿ, ಇಗಾ ನೋಡು ನಿಂಗೆ ಕನ್ನೆ ಕೊಡೋ ನೆಂಟ್ರು ಇಲ್ಲೇ ಬಂದೆವು”[೬] ಎಂದು ಹೇಳುವ ಈ ಸಮಾಜ ಹೆಣ್ಣಿಗೆ ಶೀಲದ ಹೊರೆ ಹೊರಸಿ ಗಂಡು ಸ್ವೇಚ್ಛೆಯಾಗಿ ಇರಬಹುದೆಂದು ಹೇಳುತ್ತದೆ. ಇದನ್ನು ಪ್ರಶ್ನಿಸುವ ಹನೂರರು ಮಾದೇವಿಗೆ ತನಗಿಷ್ಟವಾದವರೊಡನೆ ಇರುವ, ಬದುಕುವ ಸ್ವಾತಂತ್ರವನ್ನು ಕಲ್ಪಿಸಿಕೊಟ್ಟಿದ್ದಾರೆ. ಸಂಪ್ರದಾಯ, ಕುಲದ ಹೆಸರೇಳಿ ಹೆಣ್ಣಿನ ಮೇಲಾಗುತ್ತಿರುವ ಮಾನಸಿಕ ಕಿರುಕುಳವನ್ನು ಹನೂರರು ಒಪ್ಪುವುದಿಲ್ಲ. ಕೇವಲ ಹೆಣ್ಣಿನ ಮೇಲಿನ ದೈಹಿಕ ಆಸೆಗೆ ಅವಳನ್ನು ದುರುಪಯೋಗ ಪಡಿಸಿಕೊಳ್ಳಬೇಕೆಂಬ ಸಮಾಜದ ವಿರಿದ್ದ ಮಾದೇವಿ ಅಮತಹ ಪಾತ್ರ ತಿರುಗಿ ಬೀಳಬೇಕು. ಹಾಗಾದಾಗ ಮಾತ್ರ ಶೋಷಣೆ ಸ್ವಲ್ಪ ಮಟ್ಟಿಗಾದರೂ ನಿಲ್ಲಲು ಸಾಧ್ಯ. ಕತೆಯ ಮಾದಲು ಶಾಂತವಾಗಿದ್ದ ಮಾದೇವಿ ಕತೆಯ ಕೊನೆಗೆ ತನ್ನ ರಕ್ಷಣೆ ತಾನೇ ಮಾಡಿಕೊಳ್ಳುವ ಬದಲಾವಣೆಯಿಂದ ಕತೆ ಗಮನ ಸೆಳೆಯುತ್ತದೆ. ಮಡಿವಂತಿಕೆಯ ಪ್ರತಿರೂಪದಂತೆ ಹೆಣ್ಣನ್ನು ತೋರಿಸುವಂತೆ ಮಾಡಿ ಸಂಸ್ಕ್ರತಿಯ ಚೌಕಟ್ಟಿನಲ್ಲಿ ಬಂದಿಸಿರುವ ಈ ಸಮಾಜಕ್ಕೆ ಹೆಣ್ಣು ಕೂಡ ಸ್ವತಂತ್ರಳು, ಅವಳು ಅವಳಿಷ್ಟದಂತೆ ಉತ್ತಮ ರೀತಿಯಲ್ಲಿ ಬದುಕಬಲ್ಲಳು ಎಂಬುದನ್ನು ಈ ಕತೆ ಹೇಳುತ್ತದೆ. ಒಟ್ಟಾರೆ ಹನೂರರು ಬರೆದ ಕಾಲಕ್ಕೆ ಇಂದಿನ ಪ್ರಸ್ತುತ ಕಾಲಕ್ಕೂ ಹೆಣ್ಣಿನ ಮೇಲಾಗುತ್ತಿರುವ ದೌರ್ಜನ್ಯ ಕಡಿಮೆಯೆನಿಲ್ಲ. ಇಲ್ಲಿ ಮಾದೇವಿ ಊರು ಬಿಟ್ಟರು ಸಮಾಜ ಅವಳನ್ನು ಎಂದೂ ಬಿಡುವುದಿಲ್ಲ. ಇಂತಹ ಸಮಾಜದೊಳಗೆ ಬದುಕುವ ಹೆಣ್ಣು ಎಚ್ಚರದಿಂದ ಹೆಜ್ಜೆ ಇಡುವ ಮತ್ತು ಧೈರ್ಯದಿಂದ ಎಲ್ಲವನ್ನು ಡದುರಿಸಬೇಕೆಂಬ ವಾಸ್ತವ ಸಂಗತಿಯನ್ನು ಈ ಕತೆ ಹೇಳುತ್ತದೆ.

**ಕೈ ತಪ್ಪಿದ ಕುರಿ :**

ದಾಂಪತ್ಯದ ವೈಪರೀತ್ಯವನ್ನು, ಸಮಸ್ಯೆಗಳನ್ನು ಎದುರಿಸಲಾರದ ಜೀವನದಲ್ಲಿ ಬೇಸತ್ತ ವ್ಯಕ್ತಿ ಏಕಾಂಗಿಯಾಗಿ ದೇವರ ಜಪ ಮಾಡುತ್ತಾ ಕಾಲಕಳೆಯುವ ಅಸಹಾಯಕ ವ್ಯಕ್ತಿಯ ಬದುಕೇ ಈ ಕತೆಯ ವಸ್ತು. ಕತೆಯ ಕೇಂದ್ರ ಪಾತ್ರವಾದ ಮಂಚಯ್ಯ ಒಂದು ಮದುವೆಯಾಗಿ ಸುಖ ಕಾಣದೆ, ಮಕ್ಕಳ ಆಸೆಗೆ ಮತ್ತೊಂದು ಮದುವೆ ಮಾಡಿಕೊಂಡು ದ್ವಂದ್ವ ಏರ್ಪಟ್ಟು ಸಂಸಾರದಿಂದ ಪಲಾಯನ ಮಾಡುತ್ತಾನೆ.

ಹೇಗೊ ಸರ್ಕಾರದ ಕೊಟ್ಟ ಕುರಿಗಳಿಂದ ಬದುಕು ಕಂಡಿದ್ದ ಕುರಿಮಂಚಯ್ಯ ನೂರಾರು ಕುರಿಗಳ ಒಡೆಯನಾಗಿದ್ದ. ನಾಲ್ಕು ಕಂಭದ ತೊಟ್ಟಿ ಮನೆ ಕಟ್ಟಿ ಶಿವಮ್ಮನೊಂದಿಗೆ ಸಂಸಾರದ ಸುಖ ಕಂಡರೂ ಮಕ್ಕಳಾಗಲಿಲ್ಲ. ಗಂಡನ ವಂಶ ನಿಲ್ಲಬಾರದೆಂಬ ಕಾರಣಕ್ಕೆ ಶಿವಮ್ಮ ಯಳಂದೂರಿನ ಪೇಟೆಯ ಮಲ್ಲಾಜಮ್ಮನನ್ನು ಎರಡನೇ ಹೆಂಡತಿ ಮಾಡಿದ ಮೇಲೆ ಮೂರು ಗಂಡು ಮಕ್ಕಳಾಗುತ್ತಾವೆ. ಮಂಚಯ್ಯ ಹೆಂಡದ ಹನುಮಣ್ಣನ ಹೆಂಡತಿ ಕಡೆ ವಾಲಿ ಅವಳ ಸಂಬಂಧ ಬೆಳೆಸಿದ್ದರ ಫಲವಾಗಿ ಎರಡನೇ ಮದುವೆ ಯೋಗ ಕೂಡಿ ಬಂತು, ತಮ್ಮ ಆಸ್ತಿಗೆ ವಾರಸುದಾರರಿಲ್ಲದೆ ಹೋದರೆ ಮುಂದೆ ಹೇಗೋ ಏನೋ ಚಿಂತೆ ಶಿವಮ್ಮನಿಗೆ ಬಂದ ತಕ್ಷಣ ಮದುವೆ

ಮಾಡಬೇಕೆಂದು ಕೊಂಡಾಗ ಮುಂದಿನ ತನ್ನ ಜೀವನದ ಬಗ್ಗೆ ಚಿಂತಿಸುವುದೇ ಇಲ್ಲ. ಗಂಡು ಹೊಸ ಸಂಬಂಧಕ್ಕೆ ಸೋತಾಗ ಹಳೆ ಸಂಬಂಧ ಹಳಸಲಾಗುವುದು ಸತ್ಯ. ಹನೂರರ ಹಿಂದಿನ ಕತೆಗಳಲ್ಲಿ ದ್ವಿಪತ್ನಿತ್ವ ಕಂಡುಬರುವುದಿಲ್ಲ. ಅದರ ಸಮಸ್ಯೆಯನ್ನು ಹೊಸ ರೀತಿಯಲ್ಲಿ ಹೇಳುವ ಪ್ರಯತ್ನ ಮಾಡಿದ್ದಾರೆ. ತಮ್ಮ ಸಮಾಕಾಲೀನ ಬದುಕಿನಲ್ಲಿ ಕಂಡ ಜೀವಂತಿಕೆಯ ಕನ್ನಡಿಯೇ ಈ ಕತೆಯಾಗಿದೆ. ಮಂಚಯ್ಯ ಇಂದಿಗೂ ಮಹದೇಶ್ವರ ಬೆಟ್ಟದಲ್ಲಿ ಸಂಸಾರ ತ್ಯಾಗಿಯಾಗಿ ಕಾಲಕಳೆಯುತ್ತಿರಬಹುದು. ಗಂಡಿನ ಆಸೆ ಹೆಣ್ಣಿನ ಮೂಲ ಎಂಬಂತೆ ಎರಡನೇ ಸುಖದೊಳಗಿನ ದುಃಖ ಕಂಡಾಗ ಮಂಚಯ್ಯ ತನ್ನ ಆದಾಯ ಮೂಲವಾಗಿದ್ದ ಕುರಿಗಳನ್ನು ಯಾರೋ ಕದ್ದರೆಂದು ತಿಳಿದಾಗ ಕಂಗಾಲಾದ. ಸುಖದ ಪರಿವೆಯಲ್ಲಿ ಸಂಸಾರ ಮೂರಾ ಬಟ್ಟೆಯಾಗಿ ಜೀವನ ನಿರ್ವಹಣೆ ಕಷ್ಟವಾದಾಗ ಮಂಚಯ್ಯ "ಅವನ ಏಳಿಗೆಗೆ ಕಾರಣವಾಗಿದ್ದ ಮೊದಲ ಹೆಂಡತಿ ಶಿವಮ್ಮನ ಬಗೆಗೆ ಪ್ರೀತಿಯೂ ಇಂಥ ಹೀನ ಸ್ಥಿತಿಗೆ ತಲುಪಲು ಕಾರಣವಾದ ಎರಡನೆಯ ಹೆಂಡತಿಯ ಬಗ್ಗೆ ದ್ವೇಷವೂ ಹುಟ್ಟಿಕೊಂಡಿತು."[2] ಸಮಾಜದೊಳಗೆ ಬದುಕುವ ವ್ಯಕ್ತಿ ಸಾಮಾಜಿಕ ಕಟ್ಟುಪಾಡುಗಳಿಗೆ ಕೆಲವು ವೇಳೆ ಸೀಮಿತಗೊಳ್ಳಬೇಕು ಗಂಡಾಗಲಿ, ಹೆಣ್ಣಾಗಲಿ ಸಮಾಜದ ಕಟ್ಟುಪಾಡು ಮೀರಿ ಅನೈತಿಕತೆಗೆ ತೊಡಗುವ ಪ್ರಯತ್ನದಿಂದ ಸಮಾಜದ ಶಾಂತಿ ಕದಡಿ, ವೈಯಕ್ತಿಕ ಬದುಕು ಹಾಳಾಗುತ್ತದೆ.

ಹನೂರರು ಕತೆಯಲ್ಲಿ ಎಲ್ಲಿಯೂ ಒರಟಾಗಿ ಕಾಣುವುದಿಲ್ಲ. ಸಾಮಾಜಿಕ ಪ್ರಜ್ಞೆಯಿಂದ ಸಾಮಾಜದ ಸಮಸ್ಯೆಗಳಲ್ಲಿ ಒಂದನ್ನು ತೋರಿಸಿದ್ದಾರೆ. ಕತೆಯಲ್ಲಿ ಪರಿಸ್ಥಿತಿಯ ಅವಲೋಕನವಿದೆ. ಮಂಚಯ್ಯ ಸಂಸಾರ ತ್ಯಾಗ ಮಾಡಿ ಬೆಟ್ಟದ ಕಡೆ ಹೆಜ್ಜೆ ಇಟ್ಟಾಗಲೇ ಬಂಧನದಿಂದ ಮುಕ್ತನಾದೆ ಎಂಬ ಅರಿವು ಮೂಡಿಸಿಕೊಂಡ. ಹಸಿವಿಗಾಗಿ ದೇವರ ಬಳಿ ಮಾಡುವ ಕೆಲಸವನ್ನು ಮನೆಯಲ್ಲೇ ಮಾಡಿದ್ದರೆ ಸಂಸಾರ ಸಾಗುತ್ತಿತ್ತು. ಬದುಕಿಗೂ ಆಸರೆಯಿತ್ತು. ಹನೂರರು ಇದನ್ನು ಸೂಕ್ಷ್ಮವಾಗಿ ವಿವರಣೆಯಿಂದ ಹೇಳುತ್ತಾರೆ. ಬದುಕಿನಿಂದ ಪಲಾಯನವಗುವವರೆಗೂ ಜವಾಬ್ದಾರಿಯಿಂದ ಕಳಚಿಕೊಳ್ಳಲು ಸಾಧ್ಯವಿಲ್ಲ. ಯಾವುದೇ ಸಾಮಾಜಿಕ ಸಮಸ್ಯೆ ನಮ್ಮನ್ನು ಹಸಿವು ಕಾಡುವಷ್ಟು ಕಾಡಲು ಸಾಧ್ಯವಿಲ್ಲ. ಒಟ್ಟಾರೆ ಒಂದು ಸಂಸಾರವನ್ನು ಎದುರಿಸಲಾರದವನ್ನು ಮೂರು ಸಂಸಾರದ ಹಿಡಿತಕ್ಕೆ ಸಿಲಿಕಿದ ಮಂಚಯ್ಯನ ಮುಕ್ತಿಯ ಆಕಾಂಕ್ಷೆ, ದೈಹಿಕ ಪ್ರವೃತ್ತಿಯ ಅತಿಯಾದ ಸೆಳೆತ ಇವುಗಳ ಸಂಘರ್ಷದಿಂದ ಅಸ್ತಿತ್ವದ ಬಗ್ಗೆ ಎಚ್ಚರಿಸುವ ಕತೆಯಾಗಿ ಕಂಡುಬರುತ್ತದೆ.

**ದ್ಯಾಮವ್ವನ ಗೃಹ ಕಲಹ :-**

ಇದು ಒಂದು ಸಾಮಾಜಿಕ ವ್ಯವಸ್ಥೆಯ ಕುರಿತು ಹೇಳುವ ಸಾಂಸಾರಿಕ ವಸ್ತು ಉಳ್ಳಕತೆಯಾಗಿದೆ. ದ್ಯಾಮವ್ವ ಕತೆಯ ಕೇಂದ್ರ ಪಾತ್ರವಾಗಿ ಸ್ತ್ರೀ ಪರವಾದ ನಿಲುವನ್ನು ಹನೂರರು ವ್ಯಕ್ತ ಪಡಿಸಿದ್ದಾರೆ. ದ್ಯಾಮವ್ವ ಮೊದಲೇ ಅಂಗವಿಕಲೇ ಆಕೆಯನ್ನು ಮದುವೆಯಾಗಲು ಯಾರು ಮುಂದೆ ಬರದ ಕಾರಣ ಅಪ್ಪ ಓಬ್ಬಯ್ಯ ಅಳಿಯನಿಗೆ ಆಸ್ತಿ ಬರೆಯುತ್ತೇನೆಂದು ಹೇಳಿದ. ಮನೆಬಿಟ್ಟು ಸಾಲಗಾರನಾಗಿದ್ದ ಮೈಲಾರಿ ಇದನ್ನು ತಿಳಿದು

ದ್ಯಾಮವ್ವನ ಜೊತೆ ಮದುವೆಯಾಗಿ ಆಸ್ತಿಯೂ ಸಿಗದೆ, ಸಾಲವೂ ತೀರದೆ ಊರುಬಿಟ್ಟು ಬೇರೆ ಊರಿಗೆ ಹೋಗಿ ಮತ್ತೊಂದು ಸಂಸಾರ ಮಾಡಿಕೊಂಡು ಇತ್ತ ಬರದೇ ಹೋದ. ದ್ಯಾಮವ್ವನಿಗಾದ ಒಂದು ಗಂಡು ಮಗು ಸಂಜುಂಡ ಹುಟ್ಟುಗುಣವೆಂಬಂತೆ ಸೋಮಾರಿಯಾಗಿ ಕಳ್ಳತನ ಕಲಿತು ಊರು ಬಿಟ್ಟು ಪರಾರಿಯಾದ. ಹನೂರರು ಕತೆಯಲ್ಲಿ ಹೆಣ್ಣು ಮಕ್ಕಳಿಗೆ ಆಸ್ತಿ ಹಕ್ಕು ಇದೆ ಎಂದು ಹೇಳುವ ಮೂಲಕ ಸಮಾನತೆಯನ್ನು ಪ್ರತಿಪಾದಿಸಿದ್ದಾರೆ. ಆದರೆ ದ್ಯಾಮವ್ವನ ಅಣ್ಣ ತಮ್ಮಂದಿರು ದ್ಯಾಮವ್ವನ ಆಸ್ತಿ ನಮ್ಮದು. ನಮಗೆ ಕೊಡದೆ ಮೋಸ ಮಾಡಿದ ಅಪ್ಪನನ್ನು ಶಪಿಸುತ್ತಾ, ಸಂಚುಹಾಕುತ್ತಾರೆ. ಉಳುವವನೇ ಭೂಮಿಯ ಒಡೆಯ ಎಂಬ ಕಾನೂನು ಬಂದ ಕಾಲಕ್ಕೆ ಅಣ್ಣ ಹುಲಿಕುಂಟ್ಟಯ್ಯ ತಂಗೀ ಜಮೀನು ನಾನೇ ಉಳುತ್ತಿದ್ದು ಇದು ತನ್ನದೇ ಎಂದು ಹೇಳಿ ತನ್ನದಾಗಿಸಿಕೊಂಡ. ದ್ಯಾಮವ್ವ ಯಾರ ಬಳಿ ಸುತ್ತಿದರೂ ಅವಳ ಹೋದ ನಾಲ್ಕು ಎಕರೆ ಜಮೀನ ಅವಳದಾಗಲೇ ಇಲ್ಲ. "ಗಂಡ ಹೆಂಡಿರು, ಅಣ್ಣತಂಗಿ, ಬಂಧುಬಳಗವೆಲ್ಲ ಶತ್ರುಗಳಾಗಿ ಬದುಕುವ ಕಾಲ ಈ ಕಲಿಗಾಲ ಅಂದು ಕಣ್ಣೀರು ಹಾಕಿ ಒಡಾಡಿದಳು"[೮] ಮೇಲಿನ ಸಾಲುಗಳು ಈ ಕತೆಯ ಒಟ್ಟಾರೆ ಸಾರವನ್ನೆ ಹಿಡಿದಿಡುತ್ತದೆ. ದ್ಯಾಮವ್ವ ಒಂದು ಹೆಣ್ಣಾಗಿ, ಅಂಗವಿಕಲಳಾಗಿ ಸಮಾಜದೊಳಗೆ ಅಸ್ತಿತ್ವಕ್ಕೆ ಪರದಾಡುತ್ತಾಳೆ. ಆಸ್ತಿಗಾಗಿ ಗಂಡ ಬಿಟ್ಟುಹೋದ, ಹಣ ಕದ್ದು ಮಗ ಓಡಿಹೋದ, ಜಮೀನು ಅಣ್ಣನ ಪಾಲಾಯಿತು. ಮನೆ ಮೇಲೆ ಸಾಲಕೊಟ್ಟು ತೀರಿಸಿದರೂ ಮನೆ ತನ್ನದೆಂದು ತಮ್ಮ ದುರಾಸೆಪಟ್ಟು ಇವರೆಲ್ಲರ ನಡುವೆ ಸಿಕ್ಕಿದ ದ್ಯಾಮವ್ವ ಸೋತು ಸುಣ್ಣವಾದಳು.

ದಿನವೂ ತಾನೇ ಹಾಲು ಮಾರಿ ಜೀವನ ಸಾಗಿಸುವ ಅವಳ ಉತ್ಸಾಹ ಸ್ವಾಭಿಮಾನ ಸಂಕೇತ, ಬದುಕಿ ಬಾಳುವ ಮೂರು ದಿನದಲ್ಲಿ ಮಾನವೀಯ ಮೌಲ್ಯಗಳಯ ಕುಸಿದು ಬಿದ್ದರೆ ನೆಮ್ಮದಿ ಮಾಯಾವಾಗುತ್ತದೆ. ಹಣ, ಆಸ್ತಿಯ ಮೇಲಿನ ವ್ಯಾಮೋಹ ಹನೂರರು ಕತೆ ಬರೆದ ಕಾಲದಲ್ಲೇ ಅಲ್ಲ, ಇಂದಿಗೂ ಈ ಗೃಹ ಕಲಹಗಳು ನಿಂತಿಲ್ಲ. ದ್ಯಾಮವ್ವನ ಗೃಹ ಕಲಹ ಒಂದು ಮಾದರಿ ಅಷ್ಟೇ, ಗ್ರಾಮೀಣ ಜನಪದರ ಬದುಕು ಇಂತಹ ಗೃಹ ಕಲಹಗಳಿಂದಲೇ ತುಂಬಿ ಹೋಗಿರುವುದು ಸತ್ಯ ಇಂತಹ ಕಲಹಗಳನ್ನು ಹನೂರರು ಕಣ್ಣಾರೆ ಕಂಡವರಾಗಿ ಅದನ್ನು ಕತೆಯ ರೂಪಕ್ಕಿಳಿಸಿದ್ದಾರೆ. ಕತೆಯ ಕೊನೆಯಲ್ಲಿ ದ್ಯಾಮವ್ವನ ಗೃಹಕ್ಕೆ ಒಂದು ಹೊಸ ತಿರುವು ನೀಡುತ್ತಾರೆ. ಮಗ ನಂಜುಂಡ ತನ್ನ ಕೆಟ್ಟ ದಾರಿಯಿಂದ ಬೇಸತ್ತು. ಪಶ್ಚಾತಾಪದಲ್ಲಿ ನಂಜುಂಡ ತನ್ನ ತಾಯಿಯ ಆರೈಕೆಯ ನೆನೆದು ಮತ್ತೆ ತನ್ನ ಊರಿಗೆ ವಾಪಾಸುಗುವ ನಿರ್ಧಾರ ಮಾಡುತ್ತಾನೆ. ಇದು ಹನೂರರು ಕತೆಯಲ್ಲಿ ಸಮಾಜಿಕ ಬದಲಾವಣೆ ಕಂಡುಬರುತ್ತದೆ. "ನಂಜುಂಡನಿಗೆ ಪ್ರಪಂಚ ಎಷ್ಟುಕ್ರೂರ ಅನ್ನಿಸಿತು. ಹೆತ್ತು ಹೊತ್ತು ಸಾಕಿದ ತಾಯಿಗೆ ತಾನು ಬುದ್ದಿ ಬಂದ ಲಾಗಾಯ್ತುನಿಂದ ಮೂರು ಕಾಸಿನ ಉಪಕಾರ ಮಾಡಲಿಲ್ಲ, ಆದರೂ ಹೊತ್ತುಹೊತ್ತಿಗೆ ಕರೆದು. ಬೇಯಿಸಿದ ಪದಾರ್ಥವ ಬಾಯಿಗಿಡುತ್ತಿದ್ದ ಅವ್ವನಂಥ ವಸ್ತು ಇನ್ನು ಪ್ರಪಂಚದ ಮೇಲೆಲ್ಲ ಅಂದುಕೊಂಡ

ನಂಜುಂಡ ಇನ್ನು ಊರೇ ಸರಿ, ಅವ್ವನೇ ಅರಿ ಅನ್ನಿಸಿ ವಡೆಗೆರೆ ಹಾದಿ ಹಿಡಿದ" ನಂಜುಂಡನ ಪಾತ್ರದಲ್ಲಾದ ಈ ಮಹತ್ತರ ಬದಲಾವಣೆ ಕಥಾ ಸಾಹಿತ್ಯದಲ್ಲಿ ಹೊಸ ತಿರುವು. ಕೇವಲ ಸಮಸ್ಯೆ ಏನೆಂದು ಹೇಳಿ ಮುಗಿಸುತ್ತಿದ ಕತೆಗಾರರಿಗಿಂತ ಹನೂರರು ಭಿನ್ನವಾಗಿ ಹಿಡಿದ ಕೈಗನ್ನಡಿಯಾಗಿ ನಮಗೆ ವಾಸ್ತವವನ್ನು ತೋರಿಸಿ ಪರಿವರ್ತನೆಯ ಹಾದಿಯನ್ನು ತಿಳಿಸುತ್ತದೆ.

**<u>ಮುಖ :-</u>**

ಬದುಕಿನ ಅನಿವಾರ್ಯತೆಗಾಗಿ ಎಲ್ಲೊ ಬದುಕುವ ವ್ಯಕ್ತಿಯ ಆಂತರಿಕ ಸಂಬಂಧಗಳು ಕಷ್ಟಕಾಲದಲ್ಲೊ ಹಣದ ಲೆಕ್ಕ ಹಾಕುವ ಮುಖವಾಡದ ಬದುಕನ್ನು ಈ ಕತೆ ಹೇಳುತ್ತದೆ. ಕಿಟ್ಟಣ್ಣ ತಂದೆಯಿಂದ ಮುನ್ನೂರು ಮೈಲುಗಳ ದೂರದಲ್ಲಿ ನೌಕರಿ ಹೊಂದಿರುತ್ತಾನೆ. ತಂದೆ ತೀರಿಕೊಂಡ ಸುದ್ದಿ ತಿಳಿದು ಊರಿಗೆ ತೆರಳುತ್ತಾನೆ. ಇತ್ತೀಚಿನ ದಿನಗಳಂತೆ ದೂರವಾಣಿ, ಪ್ರಯಾಣದ ಸೌಲಭ್ಯ ಸಾಕಷ್ಟು ಇರದ ಎಂಭತ್ತರ ದಶಕ. ತಂದೆ ಪೂಜಾರಿಯಾದರೂ ಆಸ್ತಿ ಉಳ್ಳವನಾಗಿದ್ದ ಆದರೂ ತನ್ನ ತಮ್ಮನಿಗೆ ಮೋಸಹೋಗಿ ಎಲ್ಲವನ್ನೂ ಕಳೆದು ಕೊಂಡು ನೆರಳು ನೀಡಿದ ದೇವರ ಸೇವೆ ಮಾಡುತ್ತಾ ಸತ್ತುಹೋದ. ಹೀಗೆ ಹನೂರರು ಕಿಟ್ಟಣ್ಣನ ಜೀವನವನ್ನು ನಿರೂಪಣೆಯಲ್ಲಿ ಹೇಳುತ್ತಾ ಅಂತರಂಗದ ಭಾವನೆಗಳನ್ನು ತರೆದಿಡುತ್ತಾರೆ. ಸಂಬಂಧಗಳು ಕಷ್ಟಕಾಲದಲ್ಲಿ ದೂರಾಗಿ ಒಂಟಿತನಕ್ಕೆ ಒಡ್ಡುವಂತೆ ಮಾಡುವ ಕಿಟ್ಟಣ್ಣನ ಪರಿಸ್ಥಿಯ ಸುಟ್ಟು ಬದನೇಕಾಯಿಯಂತಾಗುತ್ತದೆ.

ತನ್ನ ತಂದೆಯ ಮುಖ ಸಿಗುವುದೋ ಇಲ್ಲವೂ ಎಂಬ ಆಂತಕದಲ್ಲಿಯೇ ತನ್ನ ತಾಯಿ, ಅಕ್ಕ, ತಂಗಿ, ತಮ್ಮನನ್ನು ನೆನೆದು, ಹಳೆಯ ಬಾಲ್ಯದಲ್ಲಿ ತನ್ನ ತಂದೆಯೊಡನೆ ಕಳೆದ ದಿನಗಳನ್ನು ನೆನೆದು ತನ್ನ ಊರಿಗೆ ಬರುತ್ತಾನೆ. ಊರಿಗೆ ಬಂದ ಕಣ್ಣನನ್ನು ನೋಡಿದ ಹೆಂಗಸು "ಅಯ್ಯ ನನಕಂದಾ ಈಗ ಬಂದ್ಯಪ್ಪಾ ಎತ್ತಾಗೊಯ್ತಲ್ಲಪ್ಪ ನಿಮ್ಮಯ್ಯನ್ನ ನಿಮಗೆ ಮೊಕಾನು ಸಿಕ್ನಿಲ್ವಲ್ಲ ನನ ಕೂಸೇ ವೋಗು ವೋಗು ನಿಮ್ಮವ್ವನ್ನಾರೂ ಸುಮ್ನಿರ್ಸೋಗು ಕಂದ"[೧೦] ಎಂಬ ಆಸರೆಯ ಮಾತುಗಳು ನೋವಿನಲ್ಲಿದ್ದ ಕಿಟ್ಟಣ್ಣನಿಗೆ ಸ್ವಲ್ಪ ಸಮಾಧಾನ ತಂದರೂ ತನ್ನ ಚಿಕ್ಕಪ್ಪ ಮಾವಂದಿರು ಆಡುವ ಮಾತುಗಳು "ಈಗ ಅಂದ್ರೀಗ ಇನ್ನೆಂಟು ದಿನದಲ್ಲಿ ಅಸ್ಟ ದುಡ್ನ ನಾನೆಲ್ಲಿಂದ ತರ್ಲಿ ಚಿಕ್ಕಪ್ಪ? "ಅಯ್ಯಾ ನೀನೆ ಇಂಗಂದ್ರೆಗಯ್ಯ. ನೌಕರಿ ಇಡಿದು ತಿಂಗ್ಳಾ ತಿಂಗ್ಳು ಸಂಬ್ಳ ಲೆಕ್ಕ ಆಕವಣ್ಣ ನೀನು. ನಂತವು ಕಾಸು ಕರಿಮಣಿ ಅಂತಿದ್ರೆ ನಮ್ಮಣ್ಣ ತಿಥಿ ಮಾಡಲ್ಲ ಅಂತಿದ್ನ?"[೧೧] ಎಂಬ ಚಿಕ್ಕಪ್ಪನ ಮಾತು ಸಾಮಾಜಿಕ ವ್ಯವಸ್ಥೆಯಲ್ಲಿ ಸಂಬಂಧಗಳು ಎಷ್ಟು ಕಳೆದುಕೊಂಡು ದುಃಖವಿರುವಾಗ, ಕೊನೆಯಬಾರಿ ಮುಖನೋಡದೆ ಹಿರಿಯ ಮಗ ವಿಧಿ ವಿಧಾನಗಳನ್ನು ಮಾಡದೆ ನೋವಲ್ಲರುವಾಗಲೂ ಈ ಹಾಳು ಸಂಬಂಧಗಳು ಗಣದ ಲೆಕ್ಕಾಚಾರ ಹಾಕುವುದು ಹೀನ ಸ್ಥಿತಿ.

ಹನೂರರು ಇಂತಹ ಸನ್ನಿವೇಶವನ್ನು ಕತೆಯ ವಸ್ತುವಾಗಿಸಿ ಪರಿಸ್ಥಿತಿಯ ಅವಲೋಕನವನ್ನು, ಅವಶ್ಯಕತೆಯನ್ನು ನಮ್ಮ ವಿಚಾರಕ್ಕೆ ಬಿಡುತ್ತಾರೆ. ಕಿಟ್ಟಣ್ಣ ಕತೆಯ

ಪಾತ್ರವಾಗಿದ್ದರೂ ನಮ್ಮೆದರು ಇಂತಹ ಎಷ್ಟೋ ಪಾತ್ರಗಳು ದಿನನಿತ್ಯ ಕಾಣುತ್ತವೆ. ತಂದೆ ಸತ್ತು ದುಃಖದಿಂದಿರುವವನ ಸಾಂತ್ವನ ಗೊಳಿಸುವ ಬದಲು ಜವಾಬ್ದಾರಿಯ ಪಲಾಯನ ಹಾಗೂ ಆದಾಯವನ್ನೆ ಉದ್ದೇಶವಾಗಿಟ್ಟುಕೊಂಡು ಮಾತನಾಡಿರುವ ಜನರನ್ನು ಹನೂರರು ಆತವಿಮರ್ಶೆಗೆ ಒಳಪಡಿಸುತ್ತಾರೆ.

'ಮುಖ' ಕೇವಲ ತಂದೆಯ ಕೊನೆಯ ಮುಖವಾಗದೆ ತನ್ನ ಬದುಕಿನ ಆಸರೆಯ ಬೇರುಗಳ ಕರಾಳ ಮುಖಗಳ ದರ್ಶನ ಆಗುತ್ತದೆ. ಕಿಟ್ಟಣ್ಣ ಸತ್ಯ ದರ್ಶನವನ್ನು ಈ ಮೂಲಕ ಪಡೆಯುತ್ತಾನೆ. ಕತೆಯ ಕೊನೆಯಲ್ಲಿ ಹಸಿದು ಬಂದಿದ್ದ ಕಿಟ್ಟಣ್ಣ ಏನೂ ಯೋಚಿಸದೆ ನಿದ್ರೆಗೆ ಜಾರುತ್ತಾನೆ. ಯಾರೂ ನೆರವಿಗೆ ಬರುವುದಿಲ್ಲ ಎಂಬ ಅರಿವು ಕಷ್ಟ ಕಾಲದಲ್ಲೇ ತಿಳಿಯುವುದು. ಒಟ್ಟಾರೆ ಬದುಕಿನ ಹಲವಾರು ಮುಖಗಳಲ್ಲಿ ಎಲ್ಲವೂ ಉತ್ತಮವಲ್ಲ. ಒಳ್ಳೆಯ ಮುಖಗಳಿಗಿಂತ ಕೆಟ್ಟ ಮುಖಗಳೇ ಕಾಣಿಸುತ್ತವೆ ಎಂಬ ಎಚ್ಚರಿಕೆ ನೀಡುವ ಕತೆಯಾಗಿದೆ.

**ವರ್ಗಾವಣೆ : –**

ಇದು ಶೈಕ್ಷಣಿಕ ಕ್ಷೇತ್ರದಲ್ಲಿ ಆಗುವ ಅಡತಡೆಗಳು ಹಾಗೂ ಭ್ರಷ್ಟಾಚಾರದ ರಾಜಕೀಯ ಪರಿಸ್ಥಿತಿಗಳ ಎರೆಡು ಮುಖಗಳನ್ನು ಈ ಕತೆ ತೋರಿಸುತ್ತದೆ. ಶರಣಪ್ಪ ಮಾಸ್ತರ ಬಾಳೇಕುಂದ್ರಿ. ಅವರು ಗುತ್ತಿಗೇರಿ ಗ್ರಾಮದ ಮಾಧ್ಯಮಿಕ ಶಾಲೆಯ ಮುಖ್ಯೋಪಾಧ್ಯಾಯರಾಗಿರುವವರು. ಶಾಲೆಗೆ ಸೇರಿದಾಗಿನಿಂದಲೂ ವರ್ಗಾವಣೆಯನ್ನೆ ಅನಿವಾರ್ಯತೆ ಒದಗಿ ಬಂತು. ಇದಕ್ಕೆ ಕಾರಣ ಹೊಸದಾಗಿ ಬಂದ ಯುವ ಶಿಕ್ಷಕರಾಗಿದ್ದರು. ಸರಿಯಾಗಿ ಮಾಸ್ತರಿಕೆ ಮಾಡಲು ನಿಮಗೆ ಬರುವುದಿಲ್ಲ ಎಂದು ಶರಣಪ್ಪ ತಿದ್ದುವ ಪ್ರಯತ್ನ ಮಾಡಿದರು ಅದು ತಮ್ಮಗೆ ಮಾಡಿದ ಅವಮಾನವೆಂದು ಬಗೆದು ಮೂಕ ಅರ್ಜಿಗಳನ್ನು ಬರೆದರು. ಇದರಿಂದ ವರ್ಗಾವಣೆಯ ಪತ್ರ ಶರಣಪ್ಪ ಅವರಿಗೆ ತಲೆನೋವಾಗಿ ಪರಿಣಮಿಸಿದೆ.

ಹನೂರರು ವಿಭಿನ್ನ ಕತೆಯಾದ ವರ್ಗಾವಣೆ ಹಲವು ಆಯಾಮಗಳಲ್ಲಿ ತೆರೆದುಕೊಳ್ಳುತ್ತದೆ. ಶೈಕ್ಷಣಿಕವಾಗಿ ಆಗುವ ವೈಯಕ್ತಿಕ ಸಮಸ್ಯೆಗಳನ್ನು ಸ್ವತಃ ಕಂಡು ಅನುಭವಕ್ಕೊ ಬಂದಿರುತ್ತದೆ. ಹಾಗಾಗಿ ಶರಣ್ಣಪ್ಪನವರ ವರ್ಗಾವಣೆಯ ಬೆನ್ನು ಹಿಡಿದು ಹೋಗುವ ಹನೂರರು ಶಿಕ್ಷಣ ಕ್ಷೇತ್ರದ ಅಧಿಕಾರಿಗಳ ನಿಷ್ಠೆಯಿಲ್ಲದ ಕೆಲಸದ ಬಗ್ಗೆ ವಿವರಿಸುತ್ತಾರೆ. ಉತ್ತಮ ಶಿಕ್ಷಕ ಬಗ್ಗೆ ಮೂಕ ಅರ್ಜಿಗಳು ಬಂದಾಗ ಏಕಮುಖವಾಗಿ ವರದಿ ನೀಡುವುದು ಸಾಮಾಜಿಕವಾಗಿ ಖಂಡನೀಯ. ಹೀಗೆ ಶರಣ್ಣಪ್ಪ ನವರು ಚಿಂತನೆಯಲ್ಲಿ ಇರುವಾಗ ಅನವರ ಸ್ನೇಹಿತ ತಮ್ಮ ಎಂಮ್ಮೆಲ್ಯೆ ಅವರ ಬಳಿ ಹೋದರೆ ವರ್ಗಾವಣೆ ರದ್ದಾಗುತ್ತಾದೆ. ಎಂದು ಹಣ ತುಂಬಿಕೊಂಡು ಹೊರಡುತ್ತಾರೆ, ಹನೂರರು ಬೆಂಗಳೂರಿನಲ್ಲಿ ಕನ್ನಡಿಗರಿಲ್ಲ ಪರಭಾಷಿಕರೇ ತುಂಬಿರುವ ನಿಜಸ್ಥಿತಯನ್ನು ಶರಣಪ್ಪನವರ ಮೂಲಕ ಹೇಳುವ ಪ್ರಯತ್ನ ಮಾಡಿದ್ದಾರೆ. ತಮಿಳು, ತೆಲಗು, ಹಿಂದಿ ಯವರ ಸುತ್ತಮುತ್ತೆಲ್ಲ ತುಂಬಿದ್ದರಿಂದ ಶರಣಪ್ಪನವರಿಗೆ ಕನ್ನಡದ ಬಗ್ಗೆ ಚಿಂತೆ ಮೂಡುತ್ತದೆ.

"ಇವೇ ಎಂದವೂರು ಪಿಚ್ಚೆಕಾರನ್ ಡಾ" ಎಂದು ದೋಸೆಯವ ಕೇಳಿದ ಅದಕ್ಕೆ " ಲೋ ತಮ್ಮ, ಕನ್ನಡದಾಗ ಮಾತಾಡೋ" ಅಂದರು. ಸಿಟ್ಟುಗೊಂಡ ದೋಸೆಯವ "ಏಯ್ಯ ಕನ್ನಟತಿಲೆ ಪೇಶುಣ, ಚುಮ್ಮವಾಯ ಮೂಡಿಟ್ಟು ಪೋಯ್ದು" ಅಂದ. ಮಾಸ್ತರಿಗೊ ಜೋರು ಮಾತಾಡ ಬೇಕೆನಿಸಿತು. ಸುತ್ತ ಮುತ್ತೆಲೆಲ್ಲ ತಮಿಳೇ ಕೇಳಿಸುತ್ತಿದ್ದರಿಂದ ಕೊಂಚ ಭಯವಾಗಿ ಸ್ಥಳ ಬಿಟ್ಟಳು"[೧೨]. ಇದು ಬೆಂಗಳೂರಿನ ಸದ್ಯದ ಪರಿಸ್ಥಿಯೂ ಹೌದು. ಹನೂರರು ಕನ್ನಡದ, ಕನ್ನಡದವರ ಸ್ಥಿತಿಯ ಬಗ್ಗೆ ಕತೆಯಲ್ಲಿ ತಿಳಿಸುವ ಪ್ರಯತ್ನ ಮಾಡಿದ್ದಾರೆ.

ಹೀಗೆ ಶರಣಪ್ಪ ವರ್ಗಾವಣೆ ತಪ್ಪಿಸಲು ಇದ್ದ ಬದ್ದ ಹಣವನ್ನು ಲಂಚದ ರೂಪದಲ್ಲಿ ನೀಡಿದ್ದಾಯಿತು. ಆದರೆ ಯಾವ ಪ್ರಯೋಜನವೂ ಆಗದು. ಆದರೆ ರಾಜ್ಯ ಸರ್ಕಾರ ಉತ್ತಮ ಶೀಕ್ಷಕರಿಗೆ ನೀಡುವ ರಾಜ್ಯ ಪ್ರಶಸ್ತಿ ಕೊಡುವುದಕ್ಕೆ ತಲೆಕೆಡಿಸಿ ಕೊಂಡಷ್ಟು ಶರಣಪ್ಪ ಮಾಸ್ತರ ಬಗ್ಗೆ ತಲೆಕೆಡಿಸಿಕೊಂಡಿಲ್ಲ. ಕೇವಲ ಓಟಿಗಾಗಿ ಮಾಡುವ ಉದ್ದೇಶದಿಂದ ರಾಜಕೀಯ ನಾಯಕರು ಮೇಲ್ನೋಟಕ್ಕೆ ಒಳ್ಳೆಯವರಾಗಿದ್ದಾರೆಯೇ ಹೊರತು ಶಿಕ್ಷಕರ ಮೇಲಿನ ಕಾಳಜಿಯಿಂದಲ್ಲ ಎಂಬುದು ಸ್ಪಷ್ಟ. ಬಡವರಾದ ಶರಣಪ್ಪ ತಮ್ಮ ಬೆಂಗಳೂರಿನ ಅನುಭವವನ್ನು "ಸಮುದ್ರ್ರದ ನೀರನ್ನು ಪಾನಕ ಮಾಡಲು ಬೆಲ್ಲಕೊಂಡು ಹೋಗುವುದು, ತಮ್ಮಂಥ ಬಡಪಾಯಿಗಳು ಅಲ್ಲಿ ವ್ಯವಹಾರ ಮಾಡಲು ಹಣಕೊಂಡು ಹೋಗುವುದು ಎರೆಡೂ ಒಂದೇ"[೧೩] ಎಂಬ ವಾಸ್ತವ ಸಂಗತಿಯನ್ನು ಹೆಂಡತಿಗೆ ಹೇಳುತ್ತಾನೆ.

ಸರ್ಕಾರ ರಾಜ್ಯ ಪ್ರಶಸ್ತಿ ನೀಡುವ ಉತ್ತಮ ಶಿಕ್ಷಕನ ಆಯ್ಕೆಯನ್ನು ಯಾವ ರೀತಿಯಲ್ಲಿ ಆಯ್ಕೆ ಮಾಡುವುದೆಂದು ಅರಿವಿಗೇ ಬಂದುಬಿಡುತ್ತದೆ. ಸರ್ಕಾರದ ಕೆಲಸಗಳು ಇಂದು ಎಷ್ಟು ಭ್ರಷ್ಟಾಚಾರದಲ್ಲಿ ಮುಳುಗಿದೆ. ಕೊನೆಗೆ ತಮ್ಮ ಕೆಲಸವಾಗಿದೆ ಸೋತು ಸುಣ್ಣವಾಗಿದ್ದ ಶರಣಪ್ಪನವರು ಅಸಹಾಯಕರಾಗಿ, ಬಡಕಲಾಗಿ ಹೋಗಿದ್ದರು. ತಮ್ಮ ಭಾರವೇ ತಮಗೆ ತೂಕವೆಸಿ ರಸ್ತೆಗಿಳಿದು ತೆವಳುತ್ತದ್ದ ಮಾಸ್ತರರನ್ನು ಆಟೋ ಒಂದು ಗುದ್ದಿ ಕೆಡವಿ ಹಾಯ್ದಿತು. ಕೊನೆಗೆ ಅನಾಥ ಶವವಾಗಿ ಆಸ್ಪತ್ರೆ ಶವಾಗಾರ ಸೇರಿದರು.

ಸರ್ಕಾರ ಶರಣಪ್ಪನವರನ್ನು ಬಡವರೆಂದು ಗುರುತಿಸಿ, ಮಾಸ್ತರಿಕೆಯಿಂದ ಬಿಡಿಸಿ ಹಣವನ್ನೆಲ್ಲಾ ದೋಚಿ ಇಹ ಲೋಕಕ್ಕೆ ವರ್ಗಾಯಿಸುವ ಜೀವಂತ ಚಿತ್ರಣವೇ ಈ ಕತೆಯಾಗಿದೆ.

'ಕೇರಿಗೆ ಬೋದ ಹೋರಿ' ಕಥಾ ಸಂಕಲನದ ಎಲ್ಲ ಕತೆಗಳಲ್ಲೊ ನಾಗರಿಕತೆಯ ವೈಚಾರಿಕತೆಯ, ಸಾಮಾಜಿಕ ನ್ಯಾಯ, ಬುಡಕಟ್ಟಿನ ಜನಪದರ ಬದುಕು ಗಾಢ ಪ್ರಭಾವವಾಗಿ ಜೀವಂತಿಕೆಯನ್ನು ಚೆಲ್ಲುವ ಕತೆಗಳಾಗಿವೆ. ಸಣ್ಣ ಪುಟ್ಟ ಪ್ರಸಂಗಗಳೇ ಇಲ್ಲಿನ ಬಹುತೇಕ ಕತೆಗಳಲ್ಲಿ ಹೆಣ್ಣು ಕೇಂದ್ರ ಬಿಂದುವಾಗಿದ್ದಾಳೆ. ಅವಳ ಮಾನಸಿಕ ಹಾಗೂ ದೈಹಿಕ ಶೋಷಣೆಗಳೇ ಹೆಚ್ಚು ಅನಾವರಣಗೊಳ್ಳುತ್ತವೆ. ಜೊತೆಗೆ ಪ್ರೇಮ ಕಾಮಗಳ ಮನುಷ್ಯನ ವ್ಯಕ್ತಿತ್ವಕ್ಕೆ ಬೆಲೆ ತಂದು ಕೊಡುತ್ತದಾದರೂ ಅದು ಹಾದಿ

ತಪ್ಪಿದಾಗ ನೊವಿಗೆ ಕಾರಣವಾಗುತ್ತದೆಂದೊ ಕತೆಗಾರರು ಹೇಳುವ ಪ್ರಯತ್ನ ಮಾಡಿದ್ದಾರೆ.

ಇಲ್ಲಿನ ಕತೆಗಳಲ್ಲಿ ಬರುವ ಹೆಂಗಸರು ಮುಗ್ಧರಾಗಿದ್ದು ಅದನ್ನು ದುರುಪಯೋಗ ಪಡಿಸಿಕೊಳ್ಳುವ ಪುರುಷರ ನಡವಳಿಕೆಯನ್ನು ನೈಜವಾಗಿ ಹೇಳುತ್ತಾರೆ.

ಹೀಗೆ ಗಂಡು-ಹೆಣ್ಣಿನ ಸಂಬಂಧ ಅದು ಅನೈತಿಕ ರೂಪ ಪಡೆದಾಗ ಸಮಾಜದ ಮೇಲಾಗುವ ದುಷ್ಪರಿಣಾಮಗಳನ್ನು ವಿವರಿಸುತ್ತಾರೆ. ಹೆಚ್ಚಿನ ಕತೆಗಳು ಅರಣ್ಯ ವಾಸಿಗಳ, ಗ್ರಾಮವಾಸಿಗಳ ಬದುಕು ಅನಾವರಣಗೊಂಡಿರುವುದರಿಂದ ಸತ್ವಯುತವಾದ ಕಥೆಗಳು ರೂಪುಗೊಂಡಿವೆ. ಶುದ್ಧ ನಿರೂಪಣಾ ಶೈಲಿಯ ವಿಧಾನದಿಂದಾಗಿ ಹೊಸತನ ತುಂಬಿದ್ದು, ಹಾಡು ಭಾಷೆಯೇ ಕತೆಯಲ್ಲಿ ಬಳಕೆಗೊಂಡಿರುವುದರಿಂದ ನೈಜತೆ ಇದೆ. ಬದುಕನ್ನು ಅನುಭವಿಸಿ ಅದರ ಪರಿಣಾಮದಿಂದ ಬರವಣಿಗೆ ಮೂಡಿದಾಗ ಅದು ಎಲ್ಲೂ ಡೊಳ್ಳಾಗಿ ಕಾಣಸಿಗುವುದಿಲ್ಲ. ಆಗಾಗಿ ಬದುಕನ್ನು ಅದರೆಲ್ಲಾ ಸೂಕ್ಷ್ಮತೆಯಿಂದ ನೋಡಿರುವ ಕಥೆಗಾರರು ಉತ್ತಮ ಕಥಾ ಸಂಕಲನವನ್ನು ಕನ್ನಡಕ್ಕೆ ನೀಡಿದ್ದಾರೆ.

**ಕತ್ತಲಲ್ಲಿ ಕಂಡ ಮುಖ :-**

'ಕತ್ತಲಲ್ಲಿ ಕಂಡ ಮುಖ' ಕೃಷ್ಣ ಮೂರ್ತಿ ಹನೂರು ಅವರ ಎರಡನೇ 'ಉರಿದ ಜ್ಯೋತಿ ಅರ್ಧ', 'ಔದಾರ್ಯದ ನೆರಳಲ್ಲಿ', 'ಹುಲಿಯರಾಯ', 'ಗಂಟು', 'ದಿನಾಚರಣೆ', ಎಂಬ ಏಳು ವಿವಿಧ ಬಗೆಯ ಕತೆಗಳಿವೆ. ಒಟ್ಟು ಏಳರಲ್ಲಿ ಆರು ಕತೆಗಳೂ ಸಹ ಅರಣ್ಯ ವಾಸಿಗಳ, ಕಾಡುಗೊಲ್ಲರ, ಅಲೆಮಾರಿಗಳ ಮುಂತಾದ ಗ್ರಾಮೀಣ ವಾಸಿಗಳ ನೈಜ ಬದುಕನ್ನು ಹಾಗೂ ಇಂದು ಅವರು ಎದುರಿಸುತ್ತಿರುವ ಸಮಸ್ಯೆಗಳನ್ನು ಪ್ರತಿಬಿಂಬಿಸುತ್ತವೆ. ಆದರೆ 'ಔದಾರ್ಯದ ನೆರಳಲ್ಲಿ' ಎಂಬ ಕತೆಯಲ್ಲಿ ಒಂದು ದೇವಸ್ಥಾನವನ್ನು ಹಿನ್ನಲೆಯಾಗಿಸಿ ದೇವರು, ಧರ್ಮಗಳ ವಾಸ್ತವವನ್ನು ಹೇಳುವ ಪ್ರಯತ್ನ ಮಾಡಿದ್ದಾರೆ.

ಸಾಮಾಜಿಕವಾಗಿ, ಜಾನಪದೀಯವಾಗಿ ಹಾಗೂ ಬುಡಕಟ್ಟು ಹಿನ್ನಲೆಯಲ್ಲಿ ಕಥೆಗಳನ್ನು ಅವಲೋಕಿಸಿದಾಗ ಸಮಾಜದ ಅವನತಿಯ ಬಗ್ಗೆ ಎಚ್ಚರಗೊಳಿಸುತ್ತದೆ. ಇಂತಹ ಕಥೆಗಳಲ್ಲಿ ಹನೂರರು ಎಲ್ಲೂ ವೈಭವೀಕರಿಸುವ ಪ್ರಯತ್ನಮಾಡದೆ ಸಾಕಷ್ಟು ವಸ್ತುನಿಷ್ಠವಾಗಿ ತಾವು ಕಂಡುಕೊಂಡ ಬದುಕನ್ನು ದಾಖಲಿಸುತ್ತಾರೆ. ಇಲ್ಲಿನ ಕತೆಗಳ ಪಾತ್ರಗಳು ಅವಿದ್ಯಾವಂತರು ಮತ್ತು ಅತ್ಯಂತ ಬಡವರಾಗಿದ್ದು ಇವರಲ್ಲಿ ಯಾರೂ ತ್ಯಾಗ, ಪ್ರೀತಿ, ಔದಾರ್ಯಗಳ ಆದರ್ಶದ ಬೆನ್ನುಏರುವವರಲ್ಲಿ. ಜನಪದ ಜೀವನ ಎಂಬಂತೆ ಅಲ್ಲಲ್ಲಿ ಬೈಗುಳ, ಜಗಳ, ದ್ವೇಷ, ಅಸೂಹೆಗಳಿಗೂ ಅವಕಾಶವಿದೆ. ಕುಡಿತ, ಹಾದರವನ್ನೆ ಮೈಗೂಡಿಸಿಕೊಂಡವರೂ ಉಂಟು. ಇಂತಹ ವ್ಯವಸ್ಥೆಯ ಒಳಗೆ ಬದುಕುವ ಕತ್ತಲೇ ಜನಗಳಲ್ಲೂ ಅಲ್ಲಲ್ಲಿ ತೋರುವ ಮಾನವೀಯ ಮುಖಗಳನ್ನು ಬಹಳ ಸೂಗಸಾಗಿ ಹನೂರರು ಸೆರೆಹಿಡಿದಿದ್ದಾರೆ.

ಕತ್ತಲಲ್ಲಿ ಕಂಡ ಮುಖ: ಬಾಲ್ಯದಿಂದ ಕಳ್ಳತನದ ಹಾದಿ ಹಿಡಿದ ವ್ಯಕ್ತಿ, ಸಂಸಾರದ ಯಾವ ಜವಾಬ್ದಾರಿ ಅರಿಯದೆ, ದೇವರ ಗುಡ್ಡನಾಗಿ ಕಳ್ಳತನ ಬಿಟ್ಟು ಪರಿವರ್ತನೆಯಾಗಿ ಸಾಯುವ ವಸ್ತು ಕತೆಯಾಗಿದೆ. ಕತೆಯ ಕೇಂದ್ರ ಪಾತ್ರವಾದ ಮುನಿಯ ಗುಡ್ಡನಾಗಿ ಪರಿವರ್ತನೆಯಾಗಿ ಸಾವನ್ನಪ್ಪುವುದರೊಳಗೆ ಕತೆಗಾರರು ಮನಃ ಪರಿವರ್ತನೆ ಮಾಡುತ್ತಾರೆ. ಮುನಿಯ ಬಾಲ್ಯದಿಂದಲೇ ಕಳ್ಳತನ ಮಾಡುವುದು, ಅದನ್ನು ಮಾರಿ ತಿಂದು, ಉಂಡು ಕಾಲಕಳೆಯುವುದು ಅಭ್ಯಾಸವಾಗಿ ಸೋಮಾರಿಯಾಗಿರುತ್ತಾನೆ. ಸಣ್ಣ ಕಳ್ಳತನಗಳಿಂದ ಪ್ರಾರಂಭವಾಗಿ ಊರೊಳಗೆ ಕಳ್ಳತನ ಮುಂದುವರೆಸಿ ಕೇವಲ ವೈಯಕ್ತಿಕ ಹಿತಾಸಕ್ತಿಯ ಕಡೆವಾಲುವ ಮುನಿಯ ತನಗೆ ತಾನು ಬದುಕುತ್ತಾನೆ. ನಿರೂಪಣೆಯನ್ನು ಉತ್ತಮವಾಗಿ ನಿರ್ವಹಿಸಿರುವ ಹನೂರರು ಕತೆಯಲ್ಲಿ ಕ್ಷೇತ್ರಕಾರ್ಯದ ಅನುಭವವನ್ನು ತಿಳಿಸುತ್ತಾರೆ. ಕತೆಯು ಪ್ರಾರಂಭದ ಹಂತದಲ್ಲಿ ಯಾವುದೋ ಹೆಣ ಬೇಯುವುದನ್ನು ಕಂಡು ಅದು ತಮ್ಮ ಊರಿನ ದಾಸಯ್ಯ ನುಂಡಿಯ ಮುನಿಯನದೇ ಎಂದು ತಿಳಿಯುವ ನಿರೂಪಕ ಹುಟ್ಟು ಸಾವುಗಳ ಚಿಂತಯಲ್ಲಿ ಮುಳುಗುತ್ತಾನೆ. ಸಹಜ ಸಾವು ಪುಣ್ಯವೆಂದು ಹೇಳುವ ಮುತ್ತಯ್ಯ ಮುನಿಯನಂತೆ ನನಗೂ ಹೇಳದೇ ಕೇಳದೇ ಬರಲಿ ಎನ್ನುತ್ತಾನೆ. ಸಾವು ಬದುಕಿನ ಒಂದು ಭಾಗ, ಆದರೆ ಅದು ಮನುಷ್ಯನನ್ನು ಕಾಡಿ, ನರಳಿಸಿದರೆ ಪಾಪದ ಸಂಕೇತ. ಆದರೆ ಮುನಿಯ ಇಲ್ಲಿ ಸತ್ಯವಂತನಾಗಿ, ತನ್ನ ಹಿಂದಿನ ಕಳ್ಳತನ ಬಿಟ್ಟು ಬದಲಾವಣೆ ಹೊಂದಿರುವುದರಿಂದಲೇ ಅವನಿಗೆ ತಿಳಿಯದೇ ಸಾವು ಬರುತ್ತದೆ. ಮುನಿಯ ಒಬ್ಬ ಗ್ರಾಮೀಣ ಪರಿಸರದಲ್ಲಿದ್ದ ವ್ಯಕ್ತಿ. ಅಂತಹವನು ವ್ಯಕ್ತಿತ್ವದಲ್ಲಿ ಬದಲಾವಣೆ ಪಡೆಯುವುದು. ಕಳ್ಳ ಮುನಿಯ ಗುಡ್ಡನಾಗಿ ಬದಲಾವಣೆ ಪಡೆಯುವ ಹೊಸ ತಿರುವು ಕತೆಯನ್ನು ಪುಷ್ಠಿಗೊಳಿಸುತ್ತದೆ. ಕೆಲವು ಸಂಧರ್ಭಗಳ ಹಿಡಿತಕ್ಕೆ ಸಿಕ್ಕುವ ಪಾತ್ರಗಳು ಬದುಕನ್ನು ಪರಿವರ್ತನೆ ಹೊಂದಲು ಪ್ರೇರೇಪಿಸುತ್ತದೆ.

ಹನೂರರು ಕತೆಯಲ್ಲಿ ಮುನಿಯನನ್ನು ಅವನ ಹೆಂಡತಿ ಮಾಲಮ್ಮ ಒಂದು ಮಗು ಆಗುವುದರೊಳಗಾಗಿ ಇವನ ಕಸುಬು ತಿಳಿದು ಮನೆಯಿಂದ ಹೊರಹಾಕುತ್ತಾಳೆ. ಅದು ಸಮಾಜದಿಂದಲೇ ಹೊರಹಾಕಿದಂತೆ, ಬುಡಕಟ್ಟು ಜನಾಂಗಗಳಲ್ಲಿ ಈ ಗ್ರಾಮ ನಿಷಿದ್ದತೆಯನ್ನು ವ್ಯಕ್ತಿಗಳ ಮೇಲೆ ಹೇರುತ್ತಿದ್ದುದು ಸಾಮಾನ್ಯ, ಹಾಗಾಗಿ ಮಾಲಮ್ಮ ಗಂಡನ ಸಂಗಡ ಬದುಕಲು ಆಗದೆ ಅವನನ್ನು ಸಂಸಾರದಿಂದಲೇ ನಿಷೇಧಿಸಿದ್ದಳು, ಮಗಳ ಪ್ರೀತಿಯು ಮುನಿಯನಿಗೆ ಸದಾ ಇದ್ದುದರಿಂದಲೇ ಮುದ್ದೆ, ಖಾರ ಸಮಯಕ್ಕೆ ಸರಿಯಾಗಿ ದೊರೆಯುತ್ತಿತ್ತು. ಮಾಲಮ್ಮ ಮುನಿಯನಿಗೆ ತನ್ನ ಮಗಳ ಆರೈಕೆ ಗೊತ್ತಿತ್ತಾದರೂ ಎಂದೂ ರೇಗಿದವಳಲ್ಲ. ಸಂಸಾರದಲ್ಲಿ ಯಾರೂ ಯಾರನ್ನೂ ಬಿಡುವುದು, ಸಂಭಂಧಗಳು ಕಳೆಯುವುದು ಎಂಬುದಿಲ್ಲ. ಇಲ್ಲಿ ಮಾಲಮ್ಮನು ಹಾಗೆ, ತನ್ನ ಮಗಳು ಹೊಂಬಾಳೆಗೆ ನನ್ನ ಕಂಡರೆ ಬಲು ಇಷ್ಟ, ಅವಳ ಪ್ರೀತಿ ಇರೋ ತನಕ ನಾ ಸಾಯಲ್ಲ ಎಂಬ ಮುನಿಯನ ಮಾತು ಬದುಕಲು ಉತ್ಸಾಹ.

ಕಥಾ ವಸ್ತು ಕೇವಲ ಮುನಿಯನ ಬದುಕನ್ನಷ್ಟೇ ಹೇಳದೆ ಅವನ ಸುತ್ತಲು ಬದುಕನ್ನೆಲ್ಲಾ ಹೇಳುತ್ತದೆ. ಕಥೆಯ ನಿರೂಪಕನಿಗೆ ಮುನಿಯ ಸತ್ತವಿಚಾರ ಅವನ ಹೆಂಡತಿ, ಮಗಳಿಗೆ ಗೊತ್ತಿಲ್ಲವೆಂದು ತಿಳಿದು, ತಿಳಿಸಲು ಬರುತ್ತಾನೆ. ಆದರೆ ಹೊಂಬಾಳೆಯ ಮಾತು "ಅಪ್ಪ ಬತ್ತನಲ್ಲ, ಅವನಿಗಿದನ್ನ ಕೊಟ್ಟು ಆಮೇಲೆ ಉಣ್ತೆನಿ, ಇನ್ನೂ ಅವ್ವಂದೂ ಉಂಡಾಗಿಲ್ಲ ಎಂದು ಸೀರೆಯ ಮಡಿಲಲ್ಲಿದ್ದ ಒಂದು ಚೆಂಡು ರಾಗಿ ಮುದ್ದುಯನ್ನು, ಸಿಲವಾರದ ಬಟ್ಟಲ ಸಾರನ್ನು ತೋರಿಸಿದಳು, ಹೋಂಬಾಳೆ ಮುಖದಲ್ಲಿ ಭೂಮಿ ತೂಕದ ತಾಯ್ತನ ಕಾಣಿಸುತ್ತಿತ್ತು." ಎಂಬ ತಂದೆಯ ಬರುವಿಕೆಯ ನಿರೀಕ್ಷೆ ಸಾವ ತಿಳಿಸ ಬಂದರೂ ಹೇಳಲಾಗದೆ ಕತೆ ಮುಕ್ತಾಯ ವಾಗುತ್ತದೆ.

ಕೇವಲ ತನಗಾಗಿಯೇ ಬದುಕಿದ ಮುನಿಯ, ಅಪ್ಪನ ನಿರೀಕ್ಷೆ, ಅಕ್ಕರೆ, ಮತ್ತು ಆಸೆರೆಗಾಗಿ ಕಾಯುವ ಹೊಂಬಾಳೆ. ಇಬ್ಬರನ್ನೂ ಬಿಟ್ಟಿರಲಾರದ ಮಾಲಮ್ಮನ ಬದುಕು

ಕತೆಯಲ್ಲಿ ಸೊಗಸಾಗಿ ಹೆಣೆಯಲಾಗಿದೆ. ಒಟ್ಟಿನಲ್ಲಿ ಮುನಿಯ ಒಬ್ಬ ಪರಿವರ್ತನೆಯ ಸಂತನಾಗಿ ನಮ್ಮ ಕಣ್ಣಲ್ಲಿ ನಿಲ್ಲುತ್ತಾ, ಬದುಕಿನ ಹೊಸ ನೋಟವನ್ನೇ ತೋರ್ಪಡಿಸುತ್ತಾನೆ.

**ಮುಂಜಾನೆಯೇ ಸಿಕ್ಕಿದ ಸಿರಿ :-**

ಈ ಕತೆಯ ಕೇಂದ್ರಬಿಂದು 'ಸಿರಿಯ'. ಮುಗ್ಧ ಬುಡಕಟ್ಟು ಜನರ ಸರಳತೆ, ಅವರು ಬದುಕನ್ನು ಪ್ರೀತಿಸುವ ರೀತಿ, ಅವರ ಅಂತರಾಳದ ತುಡಿತ ಮನುಷ್ಯನೇ ಆಗಿದ್ದಾನೆ. ಅದರ ಮುಂದೆ ಶ್ರೀಮಂತಿಕೆ, ವಜ್ರ, ವೈಡೂರ್ಯಗಳು ಮಂಕಾಗುತ್ತವೆ ಎಂಬ ತಿಳುವಳಿಕೆ ನೀಡುವ ಕತೆಯಾಗಿದೆ. ಬಹುತೇಕ ಕತೆಗಳಲ್ಲಿ ಕತೆಗಾರರು ಗಂಡಸನ್ನು ಸಂಸಾರದೊಳಗೆ ಬಲಹೀನ ಮಾಡಿ ಹೆಣ್ಣನ್ನು ಮುನ್ನಡೆಯುವಂತೆ ಮಾಡಿದ್ದಾರೆ. ಈ ಕತೆಯು ಅಷ್ಟೇ ಸಿರುಗವ್ವನ ಗಂಡ ಸಿರುಮನಾಯಕ ಆಕಸ್ಮಿಕವಾಗಿ ತನ್ನ ಕಾಲು ಕಳೆದುಕೊಂಡು ಶೌಚಾಲಯದಲ್ಲಿ ಹಣ ವಸೂಲು ಮಾಡುವ ಕಾಯಕಕ್ಕೆ ಸೇರಿದ. ಇವನ ಚೇಷ್ಟೇಯಿಂದಾಗಿ ಕೊಲೆಯಾಗಿ ಹೋದ. ಬುಡಕಟ್ಟು ಜನಾಂಗಗಳಲ್ಲಿ ಇಂದಿಗೂ ಮಹಿಳೆಯರೇ ಸಂಸಾರದ ನೂಗ ಹೊತ್ತಿರುವುದು ಸತ್ಯ, ಇಲ್ಲಿನ ಗಂಡಸರು ಹಾದರ, ಕುಡಿತಕ್ಕೆ ಬಲಿಯಾಗಿ ಅಲ್ಪಾಯುಷಿಗಳಾಗಿದ್ದಾರೆ. ತನಗಿದ್ದ ಎರೆಡು ಮಕ್ಕಳಲ್ಲಿ ಸಿರುಮಿಯನ್ನು ಪಾಲನಾಯಕನ ಹಟ್ಟಿಯ ಪಾಲಣ್ಣನಿಗೆ ಲಗ್ನ ಮಾಡಿದ್ದ ಸಿರುಗಪ್ಪ. ಎಳು ವರ್ಷದ ಸಿರಿಯನ್ನು ಪ್ರೀತಿಯಿಂದ ಸಾಕುವ ಆಸೆ ಪಟ್ಟವಳು. ಹೊಸದಾಗಿ ಲಗ್ನ ಮಾಡಿ ಅಳಿಯ ಮೊದಲ ದೀವಳಗೆ ಬರುವ ಸುದ್ದಿ ತಿಳಿದ ಸಿರುಗವ್ವ, ಅಳಯನಿಗೆ ಮಾಡಬೇಕಾದ ತಿನಿಸು, ಇನ್ನಿತರ ವ್ಯವಸ್ಥೆಗಳಿಗಾಗಿ ಪರದಾಡುತ್ತಾಳೆ. ಇರುವ ಒಂದಕಣ ಗುಡಿಸಲಲ್ಲಿ ಅವರಿಗೊಂದು ರೂಮುಮಾಡಿ, ಸ್ಥಾನಕ್ಕೆ ಸಿದ್ದತೆ ಮಾಡಿ, ಅಡುಗೆ ಮಾಡುವ ಪ್ರಯತ್ನದಲ್ಲಿ ಸಿರುಗವ್ವನ ಮನೆಯ ಆರ್ಥಿಕ ಪರಿಸ್ಥಿತಿ ಅರಿವಿಗೆ ಬರುತ್ತದೆ. ಬುಡಕಟ್ಟು ಜನರು ಇಂದಿಗೂ ಅತೀ ಬಡವರೇ, ಆದರೆ ಆ ಬಡತನದೊಳಗೆ ಅಡಗಿರುವ ಪ್ರೀತಿಯನ್ನು ಹನೂರರು ಈ ಕತೆಯಲ್ಲಿ ಮನೋಜ್ಞವಾಗಿ ಅನಾವರಣಗೊಳಿಸಿದ್ದಾರೆ.

ಅಳಿಯನಿಗಾಗಿ ಸಿರುಗವ್ವ ಮಗ 'ಸಿರಿ'ಗೆ ಒಂದು ರೂಪಾಯಿ ಕೊಟ್ಟು ಗುರುನಂಜಪ್ಪನ ಹೋಟೆಲಿಂದ ಇಡ್ಲಿ ತರಲು ಹೇಳುತ್ತಾಳೆ, ಆದರೆ ಅಲ್ಲಿಗೆ ಹೋದ ಮಗ ಜಿಲೇಬಿಗೆ ಮಾರುಹೋಗಿ ಇಡ್ಲಿ ಬದಲು ಜಿಲೇಬಿ ಕೊಳ್ಳುತ್ತಾನೆ. ಆದರೆ ಕೂಡಲೆ ತನ್ನ ತಪ್ಪು ಅರಿವಾಗಿ ಹಿಂದಿರುಗಿಸಲೂ ಆಗದೆ, ತಿನ್ನಲೂ ಆಗದೆ ಮನೆಗೆ ಹೋಗುವ ಬದಲು ಒಂದು ಹಳೆಯ ಮಂಟಪದಲ್ಲಿ ರಾತ್ರಿ ತಂಗುತ್ತಾನೆ. 'ಸಿರಿ' ಯೊಡನೆ ಓಡಾಡುವ ನಾಯಿಯ ಕ್ಷಣ ಕ್ಷಣದ ನಿರೀಕ್ಷೆಗಳನ್ನು ಸೂಕ್ಷವಾಗಿ ಹೇಳುವ ಹನೂರರು ಪ್ರಾಣಿಯ ಬಗೆಗಿನ ಒಡನಾಟ ತಿಳಿಯುತ್ತದೆ.

ದಿಕ್ಕು ಕಾಣದ 'ಸಿರಿ' ಹಾಳು ಮಂಟಪದ ವೀರಗಲ್ಲನ್ನು ಕೆಳಗೆ ಬೀಳಿಸಿ ಮಲಗುವ ಆಸೆಯಲ್ಲಿ ಅದರ ಕೆಳಗೆ ಸಿಕ್ಕಿ ವಜ್ರದ ಹರಳಗಳುಳ್ಳ ಕುಡಿಕೆಯನ್ನು ನೋಡಿ ಅದು ಗಾಜಿನ ತುಂಡೆದು ಬಗೆಯುತ್ತಾನೆ. ಆದರೆ ಮಗನನ್ನು ಹುಡುಕಿ ಮನೆಗೆ ಕರೆತರುವ ಸಿರುಮಿ, ಪಾಲಣ್ಣನಿಗೂ, ಸಿರುಗವ್ವನಿಗೂ ಆ ಹರಳು ವಜ್ರ ಎಂದು ತಿಳಿಯುವುದಿಲ್ಲ. ಆದರೆ ಮಗ ಸಿಕ್ಕಿದ್ದೇ ದೊಡ್ಡ ಸಿರಿ ಸಿಕ್ಕಿದಂತೆ ಎಂಬ ಆಸೆ ಅವಳಲ್ಲಿತ್ತು. ಮುಂಜಾನೆವೇ ಸಿಕ್ಕಿದ ಸಿರಿ ಮಗನಾದನೇ ಹೊರತು, ಆ ವಜ್ರಗಳು ಮಗನಿಗೆ ಸಮಾನವೇ ಆಗಲಿಲ್ಲ.

ಸಾಮಾಜಿಕವಾಗಿ ಅವರಿಗಿರುವುದು ವಾತ್ಸಲ್ಯದ ಬಯಕೆ, ಇದನ್ನು ಹೊರತು ಪಡಿಸಿ ಬೇರೆ ಯಾವ ಸಿರಿತನದ ಸೋಂಕಿಲ್ಲದೆ, ಅದರ ಅವಶ್ಯಕತೆಯೇ ತಮ್ಮಗಿಲ್ಲ ಹಾಗೆ ಅದರ ಗಂಧವೂ ತಿಳಿದಿಲ್ಲ ಎಂಬಂತೆ "ಸಿರಿಯನ ಜೇಬಿಂದ ಬಿದ್ದು ಸಿರುತೆಯಲ್ಲಿ ಚೆಲ್ಲಿಕೊಂಡಿದ್ದ ಮುತ್ತು, ರತ್ನ, ಹವಳ, ವಜ್ರ, ವೈಡೂರ್ಯ, ಮರಕತ, ಮಾಣಿಕ್ಯ ಈ ಒಂದೊಂದು ಹರಳು ಸೂರ್ಯ ಪ್ರಕಾಶದಂತೆ ಬಿದ್ದು ಬಿದ್ದಲ್ಲೇ ಥಣಥಣನೆ ಹೊಳೆಯುತ್ತಿದ್ದವು. ಹೀಗೆ ಚೆಲ್ಲಿಕೊಂಡಿದ್ದ ಮಣಿಗಳು ಕಣ್ಣಿಗೆ ಬಿದ್ದದ್ದೇ ತಡ ಸಿರುಗವ್ವ ನಿನ್ನೆ ತಾನೇ ಗೌಡ್ತಿಯನ್ನು ಕಾಡಿಬೇಡಿ ಸೆಗಣಿ ತಂದು ನೆಲ ಸಾರಿಸಿದ್ದರೆ ಈ ಹಸವಲ್ಲದ ಮಗನು ಹಾದಿ ಬೀದಿ ಗಾಜಿನ ಚೂರು, ಕಸ ಕಡ್ಡಿಯನ್ನೆಲ್ಲ ಹೊತ್ತು ತಂದು ಹಾಕಿದನೆಂದು ಮಾಮೂಲಂತೆ ಅಸಮಾಧನಗೊಂಡಳು"[೧೫] ಹನೂರರು ಪ್ರತೀ ಕತೆಯೊಳಗೆ ಬುಡಕಟ್ಟು ಜನರ ಒಂದು ಸಮಸ್ಯೆಯನ್ನು ಹೇಳುವ ಪ್ರಯತ್ನ ಮಾಡಿದ್ದಾರೆ. ಇಲ್ಲಿ ಆಕಸ್ಮಿಕವಾಗಿ ಸಿಗುವ ಸಿರಿಗಿಂತ ಮಗನೇ ಸಿರಿಯಾಗಿ ಬಿಡುತ್ತಾನೆ. ಮುಂದುವರೆದ ಸಮಾಜದೊಡನೆ ಸೇರದ ಇಂತಹ ಜನಪದರ ಬದುಕು ಹಿಂದೆ ಉಳಿಯುತ್ತಲಿದೆ ಎಂದು ಹೇಳುವ ಕತೆಗಾರರು ಮಾನವೀಯ ಮೌಲ್ಯವನ್ನು ಪ್ರತಿಪಾದಿಸುತ್ತಾರೆ.

**ಉರಿವ ಜ್ಯೋತಿ ಅರ್ಧ :-**

ಗಂಡನಿಲ್ಲದ ಹೆಣ್ಣು ಅನಾಥಳಾಗಿ ಸ್ವತಂತ್ರವಾಗಿ ಬದುಕಲು ಎದುರಾಗುವ ನಾನಾ ಸಮಸ್ಯೆಗಳನ್ನು ಈ ಕತೆಯು ಧ್ವನಿಸುತ್ತದೆ. ಇಲ್ಲಿ ದೇವಮ್ಮ ಬಾಲ್ಯವಿವಾಹಕ್ಕೆ ಗುರಿಯಾಗಿ ಜಿವನ, ಸಂಸಾರ ಎನೆಂದು ಅರಿಯುವ ಮೊದಲೇ ಗಂಡ ಸತ್ತು ಹೋಗುತ್ತಾನೆ. ಕತೆಗಾರರು ಇಲ್ಲೂ ಹೆಣ್ಣಿನ ಹೆಗಲಿಗೆ ಸಂಸಾರದ ಭಾರ ಹೊರಿಸಿದ್ದಾರೆ.

ಇಂದಿನ ಸಮಾಜದಲ್ಲಿ ಬಾಲ್ಯವಿವಾಹ ಕಡಿಮೆಯಾದರೂ ಹೆಣ್ಣಿನ ಮೇಲಾಗುತ್ತಿರುವ ದೌರ್ಜನ್ಯವೇನು ಕಡಿಮೆಯಾಗಿಲ್ಲ. ಒಂಟಿತನ ದೇವಮ್ಮ ದೊಡ್ಡಚಿಕ್ಕಪ್ಪಂದಿರ ಮನೆಯಲ್ಲಿ ಹಿಂಸೆಯನ್ನು ತಾಳಲಾರದೆ ನೂಲು ನೇಯುವ ಕಸುಬು ಕಲಿತು ಸ್ವತಂತ್ರಳಾಗುತ್ತಾಳೆ. ಸಂಬಂದದಿಂದ ಸ್ವತಂತ್ರಳಾದ ದೇವಮ್ಮ ಸಮಾಜದ ಕೆಟ್ಟ ಕಣ್ಣಿಗೆ ಅಸಹಾಯಕಳಾಗುತ್ತಾಳೆ.

ಬುಡಕಟ್ಟು ಜನಾಂಗದ ಹಟ್ಟಿಗೆ ಸೇರಿದ ದೇವಮ್ಮ ಮೂವತ್ತು ವರ್ಷದ ಪ್ರಾಯದ ಹೆಂಗಸು, ಕೂಡಾವಳಿ ಮಾಡಿಕೊಳ್ಳುವ ಪದ್ಧತಿಯಿಂದ ಇವಳ ಮೇಲೆ ಆಸೆಯಿಟ್ಟ ಪಾಪಣ್ಣ, ಕರಿಯಯ್ಯ, ಅಪ್ಪಯ್ಯ ಮೂವರು ದೇವಮ್ಮನನ್ನು ಕೆಟ್ಟ ಆಸೆಗೆ ಬಳಸಿಕೊಳ್ಳುವ ಪ್ರಯತ್ನಮಾಡುತ್ತಾರೆ. ಆದರೆ ಕುಲಾಚಾರದಲ್ಲಿ, ದೇಹ ಸಂಬಂಧದ ಬಗ್ಗೆ ಅರಿವಿಲ್ಲದ ದೇವಮ್ಮ ಮುಗ್ಧೆಯಾಗಿದ್ದಳು. ತಾನು ಕೂಲಿ ಮಾಡುತ್ತಿದ್ದಲ್ಲಿ ನೆಂಬಣ್ಣನ ಸ್ನೇಹವಾಗಿ ಇವಳಿಗೆ ಒಳ್ಳೆಯ ರೀತಿಯಲ್ಲಿ ಕಾವಲುಗಾರನಾಗಿದ್ದ. ಇದರಿಂದ ಇವಳ ಮೇಲೆ ಗುರು ಸಾನಿಧ್ಯಕ್ಕೆ ಫಿರ್ಯಾದು ತಲುಪಿತು. ಒಳಾಡಳಿತ ವ್ಯವಸ್ಥೆಯ ನ್ಯಾಯ ಸಂಭಂಧದ ಪರಿಶೀಲನೆ, ಸಾಕ್ಷಿ, ಮತ್ತು ದಂಡ ವಿಧಿಸುವ ನಿರಪರಾಧಿಗೆ ಬಿಡುಗಡೆಸಿಗುವ ಬುಡಕಟ್ಟು ನ್ಯಾಯ ಪದ್ಧತಿ ಇಂದಿನ ನಾಗರೀಕ ಸಮಾಜದ ನ್ಯಾಯ ವ್ಯವಸ್ಥೆಗಿಂತ ಉತ್ತಮವೇ ಸರಿ.

ಗಂಡು ದಿಕ್ಕಿಲ್ಲದ ದೇವಮ್ಮನ ಮೇಲಿನ ಆಸೆಗೆ ಸುಳ್ಳು ಫಿರ್ಯಾದು ನಿಲ್ಲದೆ ೩೦೦ ರೂಗಳ ದಂಡ ಕಟ್ಟುತ್ತಾರೆ, ಅನೈತಿಕ ಸೋಂಕಿಲ್ಲದ ಉತ್ತಮ ಆದರ್ಶ ಬದುಕಿನ ದೇವಮ್ಮ ನಿರಪರಾಧಿಯಾಗಿ ನಿಲ್ಲುತ್ತಾಳೆ. ಆದರೆ ಇಂತಹ ಕೆಟ್ಟ ಸಮಾಜದೊಳಗೆ ಒಂಟಿಯಾಗಿ ಬದುಕಲು ಅಸ್ಯಾಧ್ಯವೆಂದು ಅರಿತು ನಿಂಬೆಣ್ಣನನ್ನು ಸೇರಿಕೊಳ್ಳುವ ಯೋಜನೆಯಿಂದ, ಅಂದೇ ರಾತ್ರಿ ತನ್ನ ಗುಡಿಸಲು ಕಾಲಿ ಮಾಡಿ ಹೊರಡುತ್ತಾಳೆ. ನಿಂಬೆಣ್ಣ ದೇವಮ್ಮನ ಅನಿರೀಕ್ಷಿತ ಬರುವಿಕೆಯಿಂದ ಮನದಲ್ಲೆ ಸಂತಸ ಪಟ್ಟು ಮನೆ ತುಂಬಿಸಿಕೊಳ್ಳುತ್ತಾನೆ. ಕತೆಯಲ್ಲಿನ ದೇವಮ್ಮನ ಸಮಸ್ಯೆಗೆ ಕತೆಗಾರರು ಪರಿಹಾರವನ್ನು ನಿಂಬಣ್ಣನ ಮೂಲಕ ಒದಗಿಸುತ್ತಾರೆ.

‘ಉರಿವ ಜ್ಯೋತಿ ಅರ್ಧ’ ಎಂಬ ಶಿರ್ಷಿಕೆಗೆ ಕತೆಯು ಪೂರಕವಾಗಿರುವಂತಿದೆ. ದೇವಮ್ಮ ನಿಷ್ಕಳಂಕಳು ಎಂದು ತಿಳಿದಾಗ ದಂಡದ ಅರ್ಧ ಹಣ ಜ್ಯೋತಿ ಬೆಳಗಲು ಎಣ್ಣೆಯ ಖರ್ಚಿಗೆ ಕೊಡುತ್ತಾರೆ. ‘ಜ್ಯೋತಿ’ ಪ್ರಗತಿಯ ಸಂಕೇತ, ನಿರ್ಮಲತೆಯ ಸಂಕೇತ, ಹಾಗಾಗಿ ದೇವಮ್ಮ ಇನ್ನು ಉಳಿದ ಅರ್ಧ ಜ್ಯೋತಿಯಾಗಿ ನಮಗೆ ಗೋಚರಿಸುತ್ತಾಳೆ. ಕತೆಗಾರರು ಒಂದು ಬುಡಕಟ್ಟಿನ ಕಟ್ಟು ಪಾಡುಗಳನ್ನು, ದೇವರು, ಕುಲಗೋತ್ರಗಳನ್ನು ಪಾತ್ರಗಳ ಮೂಲಕ ಅನಾವರಣಗೊಳಿಸುತ್ತಾರೆ. ‘ಮಾದೇವಿ ಊರು ಬಿಟ್ಟಳು’ ಎಂಬ ಇವರದೇ ಕತೆಯ ಹೋಲಿಕೆ ಪಡೆಯುವ ಈ ಕತೆಯು ಅದಕ್ಕಿಂತ ಭಿನ್ನವಾದ ಕತೆಯಾಗಿದೆ. ಅಲ್ಲಿ ಮಾದೇವಿಯ ನಡವಳಿಕೆ ಮುಗ್ದತೆಯ ಅತಂತ್ರ ಬದುಕು, ಆದರೆ ದೇವಮ್ಮ ಮುಗ್ದತೆಯ ಸ್ವತಂತ್ರ ಬದುಕು ಕಂಡುಬರುತ್ತದೆ. ತನ್ನ ಮುಂದಿನ ಬದುಕಿನ ಸ್ಪಷ್ಟತೆಯನ್ನು ಕಂಡುಕೊಳ್ಳುವ ದೇವಮ್ಮ ಸ್ವತಂತ್ರಳಾಗುತ್ತಾಳೆ.

ಒಟ್ಟಿನಲ್ಲಿ ಒಂದು ಹೆಣ್ಣು ತನ್ನ ಬದುಕನ್ನು ಕಟ್ಟಿಕೊಳ್ಳಲು ನಡೆಸುವ ಪ್ರಾಮಾಣಿಕ ಪ್ರಯತ್ನವನ್ನು ತಿಳಿಸುತ್ತದೆ.

**ಔದಾರ್ಯದ ನೆರಳಲ್ಲಿ : –**

ಈ ಕತೆಯು ಒಟ್ಟಾರೆ ಬೇರೆಕತೆಗಳಿಗಿಂತ ಭಿನ್ನವಾಗಿ ನಿಲ್ಲುತ್ತದೆ. ಇದು ತಲಾತಲಾಂತರದಿಂದ ಬಂದ ಪೂಜಾರಿಕೆಯ ಹಕ್ಕಿಗಾಗಿ ಹೋರಡುವ ಒಂದು ದೇವಸ್ಥಾನದ ಕತೆಯಾಗಿದೆ. ಈ ಕತೆಯನ್ನು ಹೇಳುವ ಒಬ್ಬ ನಿರೂಪಕ ಆಕಸ್ಮಿಕವಾಗಿ ಒಂದು ದೇವಸ್ಥಾನಕ್ಕೆ ಹೋದಾಗ ಅಲ್ಲಿಗೆ ಮುಸ್ಲಿಂ ಹೆಂಗಸು ತನ್ನ ಮಗುವಿಗೆ ಯಂತ್ರ ಕಟ್ಟಿಸುವುದು ಕಣ್ಣಿಗೆ ಬಿದ್ದು ಅದಕ್ಕೆ ಕಾರಣವನ್ನು ತಿಳಿಯುವ ಕುತೂಹಲವಾಗುತ್ತದೆ. ಆಗ ಪೂಜಾರಪ್ಪ ಅವರನ್ನು ಹೊಸಬರರೆಂದು ತಿಳಿದು ಹಿಂದಿನ ಸಂಗತಿ ಹೇಳುತ್ತಾರೆ.

ಕತೆಯಲ್ಲಿ ಬರುವ ರಾಮಾನುಜಯ್ಯ ಹಾಗೂ ನರಸಿಂಗಯ್ಯ ಒಂದೇ ಕುಟುಂಬದ ಹಿನ್ನೆಲೆಯಿಂದ ಬಂದರೂ ನಡವಳಿಕೆಯಲ್ಲಿ ಬದಲಾವಣೆಯಿದೆ. ಕತೆಗಾರರು ಇಲ್ಲಿ ರಾಮಾನುಜಯ್ಯ ಅವರನ್ನು ಸಂಪ್ರದಾಯ, ಸರಳತೆ, ಶುದ್ದತೆಯ ಕುಲಸ್ಥರನ್ನಾಗಿಯೂ, ನರಸಿಂಗಯ್ಯ ಅವರನ್ನು ಸಂಪ್ರದಾಯ ಬಿಟ್ಟು ಅನಾಗರೀಕತೆಯ ಪ್ರತೀಕವಾಗಿಯೂ ಎದುರು ಬದುರಾಗಿಸಿದ್ದಾರೆ. ನರಸಿಂಗಯ್ಯ ಅವರ ತಂದೆ ತಿರುವೆಂಕಟದಾಸರು ರಾಮಾನುಜರನ್ನೇ ತನ್ನ ಮಗನೆಂದು ಬಗೆದು ತಮ್ಮ ಕಲಿಕೆಯನ್ನು ಧಾರೆ ಎರೆದು ಆಸ್ತಿಯನ್ನೇಲ್ಲಾ ನೀಡಿ ಕಾಲವಶರಾದರು. ತಂದೆ ಸತ್ತಾಗಲೂ ಸಹ ಕರ್ಮದೊಡನೆ ಪೋಲಿ ತಿರುಗಿದ ನರಸಿಂಗಯ್ಯ ಆಸ್ತಿ ಆಸೆಗೆ ಹೊಡುವ ಧಾವೆ ರಾಮಾನುಜರ ಸಜ್ಜನಿಕೆಗೆ, ಸತ್ಯದ ಮುಂದೆ ನಿಲ್ಲುವುದಿಲ್ಲ. ತೀರ್ಪು ನೀಡಿದ ಮುಸಲ್ಮಾನ್ ಸಾಹೇಬರು ರಾಮಾನುಜರಿಗೆ ಮುಂದಿನ ದೇವಸ್ಥಾನದ ಪೂಜಾರಿಕೆ ಎಂದು ಗ್ರಾಮದ ಜನರ ಮುಂದೆ ತಿಳಿಯುವಂತೆ ಮಾಡುತ್ತಾರೆ. ಹಾಗಾಗಿ ದುಡಿದು ಬದುಕುವ ಎಲ್ಲಾರಿಗೂ, ಸತ್ಯ, ಪ್ರಾಮಾಣಿಕತೆಯಿಂದ ನಡೆದವರಿಗೆ ದೇವರು ಎಲ್ಲವೂ ಒಂದೇ, ಧರ್ಮವೂ ಒಂದೇ ಆಗಿದೆ.

ಹೀಗೆ ಹಿನ್ನೆಲೆ ಹೇಳಿದ 'ಶ್ರೀನಿವಾಸ ಭಾಗವತ' ರು ರಾಮಾನುಜರ ಒಬ್ಬನೇ ಮಗ. ಹಿಂದೆ ನೀಡಿದ ಆ ತೀರ್ಪು ಇಂದು ರಾಮಾಪುರದಲ್ಲಿ ಮುಸಲ್ಮಾನುರು ಹಿಂದೂ ಗುಡಿಗೆ ಬಂದು ದೇವರ ಸೇವೆ ಮಾಡಲು ಕಾರಣ. ಶ್ರೀನಿವಾಸರು ಹೇಳಿದ ಹಿನ್ನೆಲೆಯು ಒಂದು ಸಂಸ್ಕೃತಿಯ ಉಳಿವಿಗೆ, ಬೆಳಯುವಿಕೆಗೆ ಮನುಷ್ಯನ ಆದರ್ಶ ಗುಣಗಳು ನೆರವಾಗುತ್ತವೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಇಲ್ಲಿ ರಾಮಾನುಜರು ಯಾವುದೇ ಒಂದು ಸಂಪ್ರದಾಯಕ್ಕೆ ಮೀಸಲಾದವರಲ್ಲ ಮಾನವೀಯ ಮೌಲ್ಯಗಳ ಪರವಾದವರು. ಅವರು ಮಗ ಶ್ರೀನಿವಾಸರು ಗುರುತು ಪರಿಚಯವಿಲ್ಲದಿದ್ದರೂ ತಮ್ಮ ಮನೆಗೆ ಕರೆದೂಯ್ದು 'ಇವರು ನಮ್ಮ ಬಂದುಗಳು' ಎಂದು ಹೇಳುವ ಔದಾರ್ಯದ ಮಾತುಗಳು ಸಮಾಜದ ಜಾತೀಯತೆ, ಮಾಡಿವಂತಿಕೆಯನ್ನು ಮೀರಿ ನಿಲ್ಲುತ್ತದೆ.

ಒಂದು ಜಾತಿಯ ಸಂಪ್ರದಾಯ, ನಂಬಿಕೆ, ಆಚರಣೆಗಳನ್ನು ಅದೇ ಜಾತಿಯ ವ್ಯಕ್ತಿ ವಿರೋಧಿಸುವ ಹಾಗೂ ಬೇರೆ ಜಾತಿಯವರಾಗಿ ಮತ್ತೊಂದು ಸಂಸ್ಕೃತಿಯನ್ನು

ಪ್ರೀತಿಸುವ ಎರೆಡು ಮನೋಭಾವವನ್ನು ಕತೆಗಾರರು ಸ್ಪಷ್ಟಪಡಿಸುತ್ತಾರೆ. ಒಟ್ಟಿನಲ್ಲಿ ದೇವರು, ಧರ್ಮ ಎರೆಡೂ ನಂಬಿಕೆಗಳ ಕೇಂದ್ರವಾದರೂ ಮನುಷ್ಯ ಮನುಷ್ಯನಿಗೆ ತೋರುವ ಔದಾರ್ಯ, ಪ್ರೀತಿ, ವಿಶ್ವಾಸ ಮುಖ್ಯ ಎಂದು ಈ ಕತೆ ಸಾರಿ ಹೇಳುತ್ತದೆ.

**ಹುಲಿಯ ರಾಯ :-**

ಮನುಷ್ಯ ಹಾಗೂ ಪ್ರಕೃತಿಯ ನಡುವಿನ ಆಂತರಿಕ ಸಂಭಂಧವನ್ನು ಒತ್ತಿ ಹೇಳುವ ಕತೆಯ 'ಹುಲಿಯ ರಾಯ', ಮಾದಾಯ್ನ ಅರಣ್ಯ ಪ್ರದೇಶದ ವಾಸ್ತವ ಚಿತ್ರಣವನ್ನು ಕೊಡುವ ಈ ಕತೆಯು, ಬದಲಾದ ನಗರೀಕರಣ, ಪರಕೀಯರ ದಾಳಿ, ಹಾಗೂ ಗಣಿಗಾರಿಕೆಯಿಂದಾಗಿ ಕಾನೆಲ್ಲವೂ ನಾಶವಾಗಿ ಪ್ರಾಣಿಸಂಪತ್ತಿನ ಅಳಿವನ್ನು ತಿಳಿಸುತ್ತದೆ. ಬುಡಕಟ್ಟಿನ ಕತೆಗಳನ್ನು ಹನೂರರು ತಮ್ಮ ಕತೆಯೊಳಗೆ ತರುವುದು ಅದರ ಮೂಲಕ ತಮ್ಮ ವಸ್ತುವನ್ನು ಬೆಳೆಸುವ ತಂತ್ರ ಉಪಯೋಗಿಸುತ್ತಾರೆ. ವಾಸ್ತವವಾಗಿ ಪ್ರಾಣಿಗಳಿಗೆ ಮಾತು ಬರುವುದಿಲ್ಲ. ಆದರೆ ಹನೂರರು ಹುಲಿರಾಯನ ಬಾಯಲ್ಲಿ ಶಿವತತ್ವನ್ನಾಡಿಸುತ್ತಾರೆ. 'ಅಪ್ಪಾ ಕಿಲಾರಿ ನಮಗೂ ಮಕ್ಕಳುಂಟು, ನಿನಗೂ ಸಂತಾನವುಂಟು, ನಿಮ್ಮ ಗೋವು ಮಕ್ಕಳನ್ನು ನಾವು ಸಾಯಗೊಲ್ಲುವುದು ಬೇಡ, ನೀವು ನಮ್ಮ ಪಾಳೆಯಗಾರರು ನಮ್ಮ ಮಕ್ಕಳನ್ನು ಬೇಟೆಯ ಮೇಲೆ ಬಂದು ಕೊಲ್ಲುವುದು ಬೇಡ, ನಾವು ಯಾರನ್ನು ಅಯ್ಯೊ ಅನ್ನಿಸದೆ, ನಮ್ಮ ನಮ್ಮ ವೃತ್ತಿ ಮಾರ್ಗವೇ ಮೇಲಾದುದೆಂದು ಬದುಕುವುದೇ ಶಿವನು ಮೆಚ್ಚುವ ಪರಿ"[೧೬] ಎಂದು ಹೇಳಿಸುವ ಹನೂರರು ಪ್ರಕೃತಿ ಸಂಪತ್ತಿನ ಅರಿವು ಮೂಡಿಸುವ ಪ್ರಯತ್ನಮಾಡಿದ್ದಾರೆ.

ಕತೆಯಲ್ಲಿ ಬರುವ ಹುಲಿರಾಯನೇ ಮಾದಯ್ನ ವಾಹನವಾಗಿ ಬದುಕು ಕಳೆಯುತ್ತೇನೆಂದು ಮುಂದೆ ಈ ನರ ಮಾನವರ ನಂಬಿದರೆ ಸಾಧ್ಯವಿಲ್ಲವೆಂದು ಹೇಳಿ ಬೆಟ್ಟದ ಕಡೆಗೆ ಹೊರಡುತ್ತದೆ. ಈಗ ಬೆಟ್ಟದಲ್ಲಿರುವ ಹುಲಿವಾಹನಕ್ಕೆ ಈ ಕತೆಯು ಮೂಲವಾಗಿ ನಿಲ್ಲುತ್ತದೆ.

ಕತೆಯಲ್ಲಿ ರಾಜಕೀಯದವರ ಜೊತೆ ಭೀಮಣ್ಣನ ಒಡನಾಟ, ಅವನ ಗಣಿಗಾರಿಕೆಗೆ ಬೆಂಬಲವಿರುವುದನ್ನು ಸೂಚಿಸುತ್ತದೆ. ನಮ್ಮ ಸಂಪತ್ತನ್ನು ಲೂಟಿ ಮಾಡುವ ಇಂತಹವರು ಇಂದಿಗೂ ನಮ್ಮ ಸಮಾಜದೊಳಗೆ ನಮ್ಮೊಳಗೆ ಇದ್ದಾರೆ. ಇದಾವುದರ ಪರಿವೆ ಇಲ್ಲದ ಬುಡಕಟ್ಟು ಜನರು ತಮ್ಮ ಬದುಕು ಕಳೆಯಲು ಗಣಿಗಾರಿಕೆ ಮಾಡುವ ಅಸಹಾಯ ಕತೆ ಕಂಡುಬರುತ್ತದೆ. ಅಕಸ್ಮಾತಾಗಿ ಕೋಳಿ ಹಿಡಿಯಲು ಬಂದ ಹುಲಿಯನ್ನು ಕೊಲ್ಲುವ ಮೇಸ್ತ್ರಿ ಈರಣ್ಣ ಅದನ್ನು ಕೊಂದೆ ಎಂಬ ಅಹಂಕಾರವನ್ನು ತೋರುತ್ತಾನೆ. ಬಲೆಯೊಳಗೆ ಸಿಲುಕಿದ ಹುಲಿಯ ಪರಿಸ್ಥಿತಿ ಇಂದು ನಮ್ಮದಾಗಿದೆ. ನಮ್ಮ ಅರಣ್ಯದ ವನರಾಜ ಕೋಳಿ ಹಿಡಿದರೆ ಗುಂಡಿಕ್ಕಿ ಕೊಲ್ಲುವ ಈರಣ್ಣ ಅದ್ಯಾವುದೋ ಬೇರೆಡೆಯಿಂದ ಬಂದ ಪರಕೀಯ ಭೀಮಣ್ಣನ ಅಡಿಯೊಳಾಗಿ ಬದುಕುವುದು ಸ್ವಾತಂತ್ರವಿಲ್ಲದ ಬದುಕು, ಅಸಾಹಾಯಕತೆಯನ್ನು ಸೂಚಿಸುತ್ತದೆ.

ಹುಲಿ ಕೊಲ್ಲಕೂಡದು ಅದು ನಮ್ಮ ದೇವರು ಎಂದು ಹೇಳುವ ಬುಡಕಟ್ಟು ಕೆಲಸಗಾರರ ಮಾತನ್ನೆ ಕೇಳದ ನಗರೀಕರಣದ ಕೆಲಸಗಾರರು ಸಂಘರ್ಷಕ್ಕೆ ಇಳಿದು

ಅವರ ಮೇಲೆ ದಾಳಿ ಮಾಡುತ್ತಾರೆ. ಅರಣ್ಯವೇ ದೇವರಾಗಿದ್ದ ಕಾಡುವಾಸಿಗಳಿಗೆ ಈ ನಗರೀಕೃತ ಅನಾಗರೀಕ ವರ್ತನೆಗಳು, ಸ್ವಾರ್ಥ, ಇವೆಲ್ಲವೂ ಒಂದು ಸಂಸ್ಕೃತಿಯ ನಾಶಕ್ಕೆ ಕಾರಣವಾಗುತ್ತಿದೆ. ಹುಲಿ ಕೊಂದ ಕಾರಣಕ್ಕೆ ಈರಣ್ಣನನ್ನು ಹಿಡಿದು ಒಳಗೆ ತಳ್ಳುವ ಪೋಲಿಸರು ಗಣಿಗಾರಿಕೆಯ ವಿರುದ್ಧ ನಿಲ್ಲಲಾರದೇ ಇರುವುದು ಇಂದಿನ ಸಮಾಜದ ಕುತಂತ್ರ ಹಣದಾಸೆಯೇ ಕಾರಣವಾಗಿದೆ. ಒಟ್ಟಿನಲ್ಲಿ 'ಹುಲಿಯ ರಾಯ' ಒಂದು ಸಾಮಾಜಿಕ ವ್ಯವಸ್ಥೆಯಲ್ಲಿ ಆಗುತ್ತಿರುವ ನಾನಾ ವಿಧದ ಅನ್ಯಾಯ, ಶೋಷಣೆಯನ್ನು ತಿಳಿಸುವ ಕತೆಯಾಗಿದೆ.

**<u>ಗಂಟು : -</u>**

ಈಕತೆಯು ಬದಲಾಗುತ್ತಿರುವ ಸಮಾಜದ ವ್ಯವಸ್ಥೆಯ ಎದರು ಬುಡಕಟ್ಟು ಜನರ ಜೀವನ ನಿಲ್ಲಲಾರದೆ ಅವರೂ ಬದಲಾಗುತ್ತಿರುವುದನ್ನು ಹೇಳುವ ಕತೆಯಾಗಿದೆ. ಕಪಿಲೆ ಕಾಟಜ್ಜ ಒಬ್ಬ ಹಗಲು ವೇಷಧಾರಿ ಬಸವಣ್ಣನನ್ನು ಹೊಡೆದುಕೊಂಡು ಜಾತ್ರೆಗಳಿಗೆ ಹೋಗಿ ಕಾಯಕ ಮಾಡಿ ಬಂದ ಭಿಕ್ಷೆಯಿಂದ ಜೀವನ ಸಾಗಿಸುತ್ತಿದ್ದ. ಹೆಂಡತಿ ತೀರಿಕೊಂಡ ಮೇಲೆ ಕಾಟಜ್ಜ ಇದ್ಧ ಒಬ್ಬಳ್ಳೇ ಮಗಳನ್ನು ಹಿಂದೆ ಮುಂದೆ ತಿಳಿಯದ ಕ್ಯಾತಪ್ಪನಿಗೆ ಮದುವೆ ಮಾಡಿದ. ಕ್ಯಾತಪ್ಪ ಗಾರೆ ಕೆಲಸದವನಾಗಿ ಬೇರೆ ದುಶ್ಚಟಗಳಿಗೂ ಬಲಿಯಾಗಿದ್ದ. ಈ ಕತೆಯಲ್ಲೂ ಗಂಡಸಿನ ಬೇಜವಬ್ದಾರಿಯನ್ನು ಹನೂರರು ತೋರ್ಪಡಿಸಿದ್ದಾರೆ. ಪಾಲಮ್ಮ ತನ್ನ ಬಾಲ್ಯದ ದಿನಗಳನ್ನು, ತನ್ನ ತಂದೆಯ ಒಡನಾಟವನ್ನು ನೆನೆದು ಸಂಸಾರವನ್ನು ಹೀಗಳಿಯುತ್ತಾಳೆ.

'ಗಂಟು' ಕತೆಯಲ್ಲಿ ಬರುವ ಮಾನವೀಯ ಮೌಲ್ಯಗಳ ಮುಂದೆ ತನ್ನ ಬೆಲೆಯನ್ನು ಕಳೆದುಕೊಳ್ಳುತ್ತದೆ. ಕಾಟಜ್ಜ ಒಂದು ವಾರ ಬಿಸಿಲು, ಧೂಳು ಎನ್ನದೆ ಜಾತ್ರೆಯಲ್ಲಿ ತಿರುಗಿ 'ಶಿವನ ನಂದಿ ನಾಹನಕ್ಕೆ ಭಕ್ತರ ಕಾಣಿಕೆ' ಎಂದು ಬೇಡಿ ಸಂಪಾದಿಸಿದ್ದ ಕಾಸಿನಗಂಟು ಮೊಮ್ಮಗ ಸಿದ್ದೋಜಿಯ ಚೆಲ್ಲಾಟದಿಂದಲೂ, ತನ್ನ ಬೇಜವಬ್ದಾರಿಯಿಂದಲೂ ಕಳ್ಳರ ಪಾಲಾಯಿತು. ಆದರೆ ಕಾಟಜ್ಜನಂತೆಯೇ ಜಾತ್ರೆಗೆ ಬಳೆ ವ್ಯಾಪಾರಕ್ಕೆ ಬಂದಿದ್ದ ಸೂರಮ್ಮ ಕಾಟಜ್ಜನ ಜ್ವರ ನೋಡಿ ಉಪಚರಿಸುತ್ತಾಳೆ. ಹಣಕ್ಕಿಂತ ಮಾನವೀಯತೆಯೇ ಸಮಯಕ್ಕಾಗುವುದು ಎಂಬ ಹನೂರರ ಚಿಂತನೆ ಜೀವನ ಪರವಾದದ್ದಾಗಿದೆ.

ಸಾಂಸಾರಿಕ ವೈಫಲ್ಯತೆಯನ್ನು ಹೇಳುವ ಹನೂರರು ಅಲೆಮಾರಿಗಳ ಅತಂತ್ರ ಬದುಕನ್ನು, ಅವರು ಬದುಕಲು ಪಡುವ ನಾನಾ ಕಷ್ಟಗಳನ್ನು ತಿಳಿಸುತ್ತಾರೆ. ಕ್ಯಾತಣ್ಣ ಸಾಂಸಾರಿಕನಾಗಿ ಕುಡಿತ, ಹಾದರಗಳಿಗೆ ಬಲಿಯಾಗಿ ತನ್ನ ಹೆಂಡತಿಯನ್ನು ಕಳೆದುಕೊಳ್ಳುವುದು. ಸೂರಮ್ಮನನ್ನು ದೇವದಾಸಿ ಮಾಡುವ ಮೂಲಕ ಅವಳ ಬದುಕನ್ನು ನಾಶಮಾಡುವ ಮೌಢ್ಯಗಳು ಸಮಾಜದಲ್ಲಿ ಬಲವಾಗಿರುವುದು. ಇವೆಲ್ಲವನ್ನು ಹೋಗಲಾಡಿಸುವ ಒಂದು ಪ್ರಯತ್ನ ಈ ಕತೆಯಲ್ಲಿದೆ.

ತನ್ನ ಮೊಮ್ಮೊಗ ಸಿದ್ದೋಜಿಯನ್ನು ತನ್ನ ಬದುಕಿನಿಂದ ದೂರವೇ ಇಡಬೇಕೆಂದು ಅಂದುಕೊಳ್ಳುವ ಕಾಟಜ್ಜ ತನ್ನ ಬದುಕಿನ ಕಷ್ಟಗಳಿಂದಾಗಿ

ಪರಿವರ್ತನೆಯಾಗುವ ಮನಸ್ಸು ತೋರಿಸುತ್ತಾನೆ. ಆಧುನಿಕವಾಗಿ ತನ್ನ ಸಿದ್ದೋಜಿ ಓದುವಂತಾಗಬೇಕು. ಎಂದು ಕತೆಯ ಕೊನೆಯಲ್ಲಿ "ತನ್ನಂತೆಯೇ ತನ್ನ ಸಿದ್ದೋಜಿಯೂ ಹಾದಿಯನ್ನೇ ಹಾಸಿ ಬೀದಿಯನ್ನೇ ಹೊದ್ದು ಮಲಗುವಂತಾಗಬಾರದೆಂದು ಹವಣಿಸಿ ಗುರುಮೂರ್ತಿ ಮೇಷ್ಟರ ಅಡಿಯಲ್ಲಿ ಮೊಮ್ಮೊಗನನ್ನು ಒಪ್ಪಿಸಿ ಹೋಗುವ ಯೋಚನೆಯಿಂದಲೂ ಶಾಲೆಯತ್ತ ಬಿರಬಿರನೆ ನಡೆದ"[೧೭] ಹೀಗೆ ಹಳೆಯ ಬದುಕಿನ ಕ್ರಮವನ್ನು ಬಿಡಲಾರದೆ, ಹೊಸದನ್ನು ಅಪ್ಪಿಕೊಳ್ಳಲಾಗದೆ ಇರುವ ಇಂತಹ ಜನರ ಬದುಕನ್ನು ಹನೂರರು ಕತೆಯಲ್ಲಿ ಅನಾವರಣಗೊಳಿಸಿದ್ದಾರೆ.

ಹಿಂದಿನಿಂದಲೂ ಬದುಕಿದ ಜೀವನ ಇಂದು ಬದುಕು ನೀಡದಾದರೆ ಬದುಕು ಸಿಗುವಕಡೆ ಹೆಜ್ಜೆ ಹಾಕಲೇ ಬೇಕು. ಈ ಒಟ್ಟು ಕಥಾ ಸಂಕಲನದ ಎಲ್ಲಾ ಕತೆಗಳೂ ಇಂತಹ ಬದಲಾವಣೆಯನ್ನು ಬಯಸುತ್ತದೆ. ಹನೂರರಿಗೆ ಈ ಬುಡಕಟ್ಟು ಜನಾಂಗಗಳ ನಿಕಟ ಸಂಭಂಧವು ಕ್ಷೇತ್ರ ಕಾರ್ಯದ ಸಂಧರ್ಭದಲ್ಲಿ ದೊರಕಿದ್ದರಿಂದ ಅವರ ಬದುಕಿನ ಎಲ್ಲಾ ವಿವರಗಳನ್ನು ನೈಜವಾಗಿ ನೀಡುತ್ತಾರೆ. 'ಕತ್ತಲಲ್ಲಿ ಕಂಡ ಮುಖ' ಕಥಾ ಸಂಕಲನ ಇಂತಹ ಸಾಧ್ಯತೆಯನ್ನು ಹೆಚ್ಚು ಪ್ರತಿಪಾದಿಸುತ್ತದೆ.

ಒಟ್ಟಿನಲ್ಲಿ ಈ ಕಥಾಸಂಕಲನವು ನಮ್ಮಂತೆ ಇರುವ ಎಷ್ಟೋ ಮನುಷ್ಯರ ಕಷ್ಟಗಳನ್ನು ತಿಳಿಸುತ್ತದೆ. ಬುಡಕಟ್ಟು ಜನರ ವಾಸ್ತವ ಬದುಕಿನ ಸತ್ಯದ ಕಡೆಗೆ ಎಳೆಯುತ್ತದೆ. ಜಾನಪದದ ಜೀವನ ಕ್ರಮವನ್ನು ಅದರ ಸಿರಿವಂತಿಕೆಯನ್ನು ತಮ್ಮ ಕತೆಯೊಳಗೆ ತುಂಬಿ ಉತ್ತಮ ಕತೆಗಳನ್ನಾಗಿಸಿದ್ದಾರೆ.

**ಕಳೆದ ಮಂಗಳವಾರ ಮುಸ್ಸಂಜೆ... :-**

'ಕಳೆದ ಮಂಗಳವಾರ ಮುಸ್ಸಂಜೆ' ಹನೂರು ಅವರ ಮೂರನೇ ಕಥಾಸಂಕಲನವಾಗಿದೆ. ಇದರಲ್ಲಿ 'ಕಳೆದ ಮಂಗಳವಾರ ಮುಸ್ಸಂಜೆ', 'ರೈಲು ನಿಲ್ದಾಣದಲ್ಲಿ', 'ಮುಖ್ಯಮಂತ್ರಿಗಳಿಗೆ ನೀಲಗಾರ ಸಿದ್ದಜ್ಜನ ಮನವಿ', 'ಇರುವುದೆಲ್ಲ ಬಿಟ್ಟು..', 'ಕವಿ ಮತ್ತು ಕಾಜಾಣ', 'ಕಣ್ಣು ತೆರೆಸುವುದೆಂದರೆ..', 'ಸುವರ್ಣ ಇತಿಹಾಸ', 'ಸಾವಧಾನವ ಮೀಟಿದ ಅಳು', 'ಸಿಸ್ಟಮ್ ಫೈಲ್ಯೂರ್', 'ಜುಯೆಲ್ ಬಾಕ್ಸ್' ಮತ್ತು 'ನಿರ್ಧಾರ' ಎಂಬ ಹನ್ನೊಂದು ಕತೆಗಳಿವೆ.

ಈ ಕಥಾಸಂಕಲನದಲ್ಲಿ ಸಾಮಾಜಿಕ, ರಾಜಕೀಯ, ಧರ್ಮಿಕ ಅಂಶಗಳನ್ನು ಎತ್ತಿಕೊಂಡು ಅವು ಜನಪದ ಬದುಕಿನಲ್ಲಿ ಮಾಡುವ ಪ್ರಭಾವವನ್ನು, ಬದಲಾವಣೆಗಳನ್ನು ತಿಳಿಸಿದ್ದಾರೆ. ಹಳೆಯ ಸಂಪ್ರದಾಯ, ಕಲೆ, ಆಚರಣೆಗಳನ್ನು ಬದಿಗಿರಿಸಿ ಆಧುನಿಕತೆಯು ಹೆಚ್ಚು ಪ್ರಭಾವಿತವಾಗಿರುವುದನ್ನು ಈ ಕತೆಗಳು ಧ್ವನಿಸುತ್ತವೆ.

**ಕಳೆದ ಮಂಗಳವಾರ ಮುಸ್ಸಂಜೆ .. :**

ಪೂಂಗೋಲೆಯಮ್ಮಾಳ ಎಂಬ ತಮಿಳು ಮೂಲದ ಹೆಂಗಸು ಪೂವಮ್ಮಳಾಗಿ ಮಲೆಯ ಮಾದಯ್ಯನ ಅರಣ್ಯಸುತ್ತಿನ ಕೃಷ್ಣಾಪುರದಲ್ಲಿ ನೆಲೆಸಿ ಎಲ್ಲರ ಪ್ರೀತಿಗೆ ಪಾತ್ರಳಾದವಳ ಕತೆಯಾಗಿದೆ. ತಿರುವೆಂಕಟಪತಯ್ಯ ಕೃಷ್ಣಾಪುರದ ಹನುಮಂತ ದೇವರ

ಗುಡಿಯ ಪೂಜಾರಿ ತಮಿಳುನಾಡಿನಲ್ಲೆ ಹುಟ್ಟಿ ಬೆಳೆದು ಇಬ್ಬರೂ ಲಗ್ನವಾಗಿ ಯಾವುದೇ ಕಾರಣಕ್ಕೆ ಕೃಷ್ಣಾಪುರಕ್ಕೆ ಬಂದು ನೆಲೆಸಿದರು.

ಬಾಲ್ಯವಿವಾಹ ಜಾರಿಯಲ್ಲಿದ್ದ ಕಾಲದಲ್ಲಿ ಎಂಟನೇ ವಯಸ್ಸಿಗೆ ಪೂವಮ್ಮ ದಾಂಪತ್ಯಕ್ಕೆ ಕಾಲಿರಿಸಿದರೂ ಸಹ ತಮ್ಮ ಬುದ್ಧಿ ಬಂದಕಾಲಕ್ಕೆ ಸಂಸಾರದ ಅರಿವು ಬಂದಿತೆಂದು ನೆನೆಸಿಕೊಳ್ಳುತ್ತಾರೆ. ಹೀಗೆ ಸಾಂಸಾರಿಕವಾಗಿ ಕಷ್ಟವಿಲ್ಲದಿದ್ದರೂ ಸಹ ನಲವತ್ತಾದರೂ ಮಕ್ಕಳಾಗದಿದ್ದು ಒಂದು ಕೊರಗಾಗಿ ಉಳಿಯಿತು.

ಮಕ್ಕಳಾಗದ ಪೂವಮ್ಮ ಹೆರಿಗೆ ಮಾಡಿಸುವುದು, ಮಕ್ಕಳಿಗೆ ಕೈ ಮದ್ದು ಕೊಡುವುದು, ಯಂತ್ರಕಟ್ಟಿ ಗುಣಪಡಿಸುತ್ತಿದ್ದರು. ಹನೂರರು ಪೂವಮ್ಮನ ಮಾನವೀಯ ಮೌಲ್ಯವನ್ನು, ಹಾಗೆ ಒಂಟಿತನದ ಬದುಕು ಎಷ್ಟು ಮಾನಸಿಕ ಹಿಂಸೆಗೆ ಕಾರಣವಾಗುತ್ತದೆಂದು ಹೇಳುವ ಪ್ರಯತ್ನ ಮಾಡಿದ್ದಾರೆ. ಪೂವಮ್ಮ ಸುತ್ತಮುತ್ತಲಿನ ಊರಿನವರೆಲ್ಲರೂ ಪೂವಮ್ಮನ ಮೇಲಿರಿಸಿದ್ದ ಗೌರವ ಅವಳನ್ನು ತೊಂಭತ್ತೆರೆಡು ವರ್ಷಗಳು ಉಳಿಯುವಂತೆ ಮಾಡಿದ್ದವು. ಆದರೂ ಪೂವಮ್ಮನು ಊರ ಜನರೇ ನನಗೆ ದೇವರು, ಮಕ್ಕಳ ಪಾಲಿಗೆ ನಾನಿನ್ನೂ ಬೇಕಾದವಳು ಎಂದು ಊರ ಮಕ್ಕಳಿಗೆ ಅನ್ನ ತಿನ್ನಿಸುವುದು, ಇತ್ಯಾದಿ ಲಾಲನೆ ಪಾಲನೆ ಮಾಡುತ್ತಿದ್ದಳು.

ಊರ ಹೆಂಗಸರಿಗೆ ಹೆರಿಗೆಯಾಗಿ ಗಂಡೊ ಹೆಣ್ಣೋ ಆದರೆ ದೇವರ ಹೆಸರೇಳಿ ಇವಳು ಪಾರ್ವತಿ, ಚಾಮುಂಡಿ, ಗಂಡಾದರೆ ಇವನು ಹನುಮಣ್ಣ, ಭೀಮ ಎಂದು ಹೇಳಿ ತನ್ನ ಮಡಿಲು ತುಂಬಿಕೊಳ್ಳುವ ಪ್ರಯತ್ನ ಮಾಡುತ್ತಿದ್ದಳು. ಯಾವ ಕೂಸಾದರೂ ಅತ್ತರೆ "ಪೂವಮ್ಮ ಎದೇಲಿ ಹಾಲಿಲ್ದೆ ಕೂಸು ಅಳತಾದೆ, ಒಂದಿಡಿ ಅನ್ನ ಇದ್ರೆ ನೋಡವ್ವ, ನೀಕೊಟ್ಟಾ ಅನ್ನನ ಕೂಸು ಹಾಲಿಗಿಂತ ಚಂದಾಗಿ ಬಾಯಿಗಾಕ್ಕಾಂಡು ನೋಣಿತದೆ"[೧೮] ಎಂದು ತಾಯಂದಿರು ಪೂವಮ್ಮನ ತಾಯ ಪ್ರೇಮದ ಬಗ್ಗೆ ಹೇಳುತ್ತಿದ್ದರು. ಇಂತಹ ಪೂವಮ್ಮ 'ಕಳೆದ ಮಂಗಳವಾರ ಮುಸ್ಸಂಜೆ' ಸಾವನ್ನಪ್ಪಿದ್ದಳು ಎಂದು ಹನೂರರು ಶೀರ್ಷಿಕೆಯಲ್ಲಿ ಹೇಳುತ್ತಾರೆ.

ಕ್ಷೇತ್ರಕಾರ್ಯದ ಹಾದಿಯೊಳಗೆ ಎಷ್ಟೋ ಇಂತಹ ಜೀವಂತ ಪಾತ್ರಗಳು ಕಾಣುತ್ತವೆ. ಹಾಗಾಗಿ ಹನೂರರು ಇಂತಹ ಒಂದು ಪಾತ್ರದ ಜೀವನದ ಸಾರ್ಥಕತೆಯನ್ನು ಕತೆಯಾಗಿಸಿದ್ದಾರೆ. ಪೂವಮ್ಮನ ಇಡೀ ಜೀವನ ಚರಿತ್ರೆ ಪುಟ್ಟ ಕತೆಯೊಳಗೆ ನೆನಪುಗಳ ಮರೆಯಲ್ಲಿ ಸೊಗಸಾಗಿ ಸಾಗುತ್ತದೆ. ಪೂವಮ್ಮನ ವ್ಯಕ್ತಿತ್ವವು ಫಲಬಿಡದ ಮರವಾದರೂ ನೆರಳು ನೀಡುವ ತುಂಬು ಮರದಂತೆ ಕಾಣುತ್ತದೆ. ಇಂತಹ ಪಾತ್ರಗಳು ಜನಪದರ ಬದುಕಿನಲ್ಲೇ ಅಳಿಯದೆ ಉಳಿದುಕೊಳ್ಳುತ್ತವೆ. ಹಾಗಾಗಿಯೇ ಇಂದಿಗೂ ಪೂವಮ್ಮ ತೀರಿಕೊಂಡಿರುವುದು ನಿಜವೇ? ಎಂಬಂತೆ ಎಲ್ಲರ ಹೃದಯದಲ್ಲಿ ನೆಲೆಸಿದ್ದಾಳೆ.

ಹಾಗಾಗಿ ಈ ಕತೆ ಒಂದು ಸಮಾಜದ ಶಾಂತಿಯನ್ನು ಕಾಪಾಡುವ ನಿಟ್ಟಿನಲ್ಲಿ ಸಮಾಜದಲ್ಲಿ ಉಳಿಯಬೇಕಾದ ಮಾನವೀಯ ಮೌಲ್ಯಗಳನ್ನು ತಿಳಿಸುತ್ತದೆ. ಪರಸ್ಪರ ಪ್ರೀತಿಯ ಹಂಚಿಕೆಯನ್ನು ಪ್ರತಿಪಾದಿಸುತ್ತದೆ. ವಿಡಂಬನೆ ಎಲ್ಲಿಯೂ

ಕಂಡುಬರದಿದ್ದರೂ ಹಿತಮಿತವಾದ ಭಾಷೆಯಿಂದಾಗಿ ಗಮನಸೆಳೆಯುತ್ತದೆ. ಓದುಗರಲ್ಲಿ ಹೃದಯವಂತಿಕೆಯನ್ನು ಪ್ರಶ್ನಿಸುತ್ತಲೇ ಕತೆ ಮುಕ್ತಾಯಕ್ಕೆ ತಲುಪುತ್ತದೆ. ಒಳ್ಳೆಯ ಮನುಷ್ಯನಾದವನಿಗೆ ಜಾತಿ, ಭಾಷೆ, ಸ್ಥಳ ಇವುಗಳ ಹಂಗಿಲ್ಲ ಎಂಬುದನ್ನು ಈ ಕತೆಯು ಸಾರಿ ಸಾರಿ ಹೇಳುತ್ತದೆ.

<u>**ರೈಲು ನಿಲ್ದಾಣದಲ್ಲಿ :**</u>

ಈ ಕತೆ ಸುಧೀರ್ಘ ಪಯಣದ ಹಲವು ಅನುಭವಗಳ, ಹಳೆಯ ನೆನಪುಗಳಿಂದಲೇ ಕತೆಯು ಹೊಸ ನಿರೂಪಣೆಯಿಂದ ಗಮನ ಸೆಳೆಯುತ್ತದೆ. ಹನೂರರ ಪ್ರವಾಸ ಕಥನ ಎಂದರೆ ತಪ್ಪಿಲ್ಲ. ಅಹಮದಾಬಾದಿಗೆ ಪ್ರಯಾಣ ಬೆಳಸಿದಾಗಿನ ಅನುಭವವನ್ನು 'ರೈಲು ನಿಲ್ದಾಣದಲ್ಲಿ' ಎಂಬ ಕತೆಯ ಮೂಲಕ ಹೇಳಿದ್ದಾರೆ. ಮೂರು ರೀತಿಯ ಅನುಭವಗಳು ಇಲ್ಲಿ ವಿಭಿನ್ನವಾಗಿವೆ.

ಅ) ರಾತ್ರಿಯಾದ ಕಾರಣ ರೈಲು ನಿಲ್ದಾಣದಲ್ಲಿ ಮಲಗಲು ಜಾಗವಿಲ್ಲದೆ ಒಬ್ಬ ಪೋರ್ಟರ್ ಹೇಳಿದನೆಂದು ಆಟೋ ಹತ್ತುತ್ತಾರೆ. ಹತ್ತುವಾಗ ಇದ್ದ ಆಟೋದವನ ಒಳ್ಳೆಯತನ ಇಳಿಯುವಾಗ ದಬ್ಬಾಳಿಕೆಯಾಗಿ ಬದಲಾಗುತ್ತದೆ. ರಾತ್ರಿ ೧೧ ಗಂಟೆ ಸಮಯ ಇನ್ನೇನು ವಿಧಿಯಿಲ್ಲದೆ ಹಾಳು ಕಟ್ಟಡಕ್ಕೆ ತಂದು ಬಿಟ್ಟು ಹೋದ, ಅದರ ಹಾವ ಭಾವವೆಲ್ಲ ಹೇಳುವಾಗ ಅದು ವೇಶ್ಯಾವಾಟಿಕೆ ನಡೆಸುವ ಜಾಗ ಎಂದು ತಿಳಿದರೂ ನಿದ್ದೆಯ ಕಾರಣ ತಲೆಕೊಟ್ಟರೆ ಸಾಕೆನಿಸಿ ಹೊರಟವರಿಗೆ ಮೇಟಿ ವಾಸ್ತವವನ್ನು ತೆರೆದಿಟ್ಟ. ಇದರಿಂದ ಮುಂಬೈನ ಕತ್ತಲ ಮುಖವನ್ನು ಅರಿತು ಅಲ್ಲಿಂದ ಹೊರಡುತ್ತಾರೆ. ನಾಲ್ಕು ಗಂಟೆಗೆ ರೈಲು ಹೊರಡುವ ಸಮಯವಾಗಿದ್ದರಿಂದ ಸೀಟಿಗಾಗಿ ಪರದಾಡುವ ಜನರು, ಒಂದು ಹುಡುಗನಿಂದ ಮೋಸ ಹೋಗುವುದು ದುಸ್ತರ.

ಆ) ರೈಲು ಹತ್ತಿ ಹೊರಟವರಿಗೆ ತನ್ನ ಮುಂದೆ ಕುಳಿತ ಹೆಂಗಸು ತನ್ನ ಹಳೆಯ ಪ್ರೇಯಸಿ ಎಂದು ಗೊತ್ತಾಗುತ್ತದೆ. ಅವರೊಡನೆ ಮಾತಾಡುತ್ತಾ ತನ್ನ ಊರು-ಕೇರಿ, ತಂದೆ-ತಾಯಿ, ಬಾಲ್ಯ, ವಿದ್ಯಾಭ್ಯಾಸ, ಹೀಗೆ ನಾನಾ ನೆನಪುಗಳು ಕಾಡುತ್ತವೆ.

ಇ) ಹಳೆಯ ಪ್ರೇಯಸಿಯ ಪ್ರೀತಿ ಹಸಿರಾಗಿದೆ ಎಂದು ತಿಳಿದು ಒಂದು ರೈಲು ನಿಲ್ದಾಣದಲ್ಲಿ ಇಳಿದಾಗ ಸಿಕ್ಕ ಅಜ್ಜನ ವ್ಯಕ್ತಿತ್ವ, ಪ್ರೀತಿಯು ಆಶ್ಚರ್ಯವೆನಿಸುತ್ತದೆ.

ಹೀಗೆ ಮೂರು ಹಂತಗಳಲ್ಲೂ 'ರೈಲು ನಿಲ್ದಾಣ'ವೇ ವಿಶೇಷವಾಗಿ ಕೇಂದ್ರಸ್ಥಾನದಲ್ಲಿದ್ದು ವೈಯಕ್ತಿಕ ಸಂಗತಿಗಳು, ಯೌವನ್ನದ ನಾನಾ ಆಕಾಂಕ್ಷೆಗಳು ಅಭಿವ್ಯಕ್ತಿಯಾದಾಗ ಹೊಸ ಆಯಾಮ ದೊರೆಯುತ್ತದೆ. ಮುಂಬೈನ ಒಂದು ರಾತ್ರಿಯ ಅನುಭವವು ಯೌವನ ಹಾಗೂ ಪುರುಷತ್ವವನ್ನೇ ಪ್ರಶ್ನಿಸುವಂತೆ ಕಾಣುತ್ತದೆ. ಆದರೆ ವಾಸ್ತವವಾಗಿ ಅದು ವ್ಯಕ್ತಿಯ ಅಂತರ್ ಶುದ್ಧಿಯಿಂದ ಅಸಹ್ಯವೆನಿಸುತ್ತದೆ.

ರೈಲಿನಲ್ಲಿ ಎದುರಿಗೆ ಕೂತ ದಂಪತಿಗಳೊಡನೆ ಆಗುವ ವಿನಿಮಯದ ಮಾತುಗಳು ಕತೆಗೆ ಹೊಸ ತಿರುವು ನೀಡುತ್ತದೆ. ತನ್ನ ಪ್ರೇಯಸಿಯೇ ಇಂದು

ತಾಯಿಯಾಗಿ ತನ್ನ ಮುಂದೆ ಕುಳಿತಿದ್ದಾಳೆ ಎಂದು ಸಂತೋಷ ಪಡುತ್ತಾ, ತನ್ನ ಮನೆಯ ಪರಿಸ್ಥಿತಿ, ಬಡತನದ ನೆನಪಾಗುತ್ತದೆ. ಬಡತನದಿಂದ ಪ್ರೀತಿ ತುಂಬಾ ದೂರವೆನಿಸುತ್ತದೆ. ವರ್ತಮಾನದೊಡನೆ ಭೂತಕಾಲವು ಸೆಣಸಾಡುವುದು. ಅದು ಕೇವಲ ಮನಸ್ಸಿನಲ್ಲಿ, ಯಾರಿಗೂ ಹೇಳಲಾಗದ ಅನುಭವಗಳು ಈ ಕತೆಯಾಗಿ ಮಾರ್ಪಡುವುದು ವಿಶೇಷ, ನಿರೂಪಕನು ಒಂಟಿತನದಿಂದಲೇ ಹಳೆಯ ನೆನಪುಗಳನ್ನು ಕಂಡರೂ ಕತೆ ಸ್ವಚ್ಛ ಪರಿಸರದಲ್ಲಿ ಇರುವ ರೈಲು ನಿಲ್ದಾಣದ ಅಜ್ಜನ ಪ್ರವೇಶದೊಂದಿಗೆ ಹೊಸ ಚೈತನ್ಯ ಪಡೆಯುತ್ತದೆ. ತಾಯಿಲ್ಲದ ಮಗುವಿಗೆ ತಾಯ ಪ್ರೀತಿ ದೊರೆತಷ್ಟು ಸಂತೋಷವಾಗಿ ಅಜ್ಜನೊಡನೆ ಒಂದು ದಿನ ಕಳೆಯುವುದು ತೃಪ್ತಿ ಎನಿಸುತ್ತದೆ.

ಕತೆಯು ಒಟ್ಟಾರೆಯಾಗಿ ಅನುಭವಗಳ ಸರಮಾಲೆಯಾಗಿಯೇ ಕಾಣುತ್ತದೆ. ಬಡತನದ ಕಾರಣ ಯಾವುದೂ ದೊರಕದು ಎಂಬ ಸ್ಪಷ್ಟ ಪ್ರತಿಪಾದನೆ ಕಂಡುಬರುತ್ತದೆ. ಅದು ಒಳ್ಳೆಯದೋ ಅಥವಾ ಕೆಟ್ಟದ್ದೋ ತಿಳಿಯದು. ಹಾಗಾಗಿ ಈ ಕತೆ ಜೀವನಧ್ಯೇಯಗಳ, ಗುರಿಯ ಕಡೆಗೆ ಸಾಗುವಾಗ ಇಂತಹ ಅನುಭವಗಳಿಗೆ ಸೋಲದೆ ಗುರಿಯಷ್ಟೇ ಮುಖ್ಯ ಎಂಬುದನ್ನು ಸ್ಪಷ್ಟವಾಗಿ ಹೇಳುತ್ತದೆ.

**ಮುಖ್ಯಮಂತ್ರಿಗಳಿಗೆ ನೀಲಗಾರ ಸಿದ್ದಜ್ಜನ ಮನವಿ :**

ಈ ಕತೆಯು ಭ್ರಷ್ಟ ರಾಜಕಾರಣ, ಕಲಾವಿದರ ಶೋಷಣೆ ಹಾಗೂ ಪತನವಾಗುತ್ತಿರುವ ನಮ್ಮ ಸಮಾಜವನ್ನು ಕನ್ನಡಿ ಹಿಡಿದಂತೆ ತೋರಿಸುತ್ತದೆ. ಮಲೆಯ ಮಾದಯ್ನ ಅರಣ್ಯ ಪ್ರದೇಶದಲ್ಲಿ ತಂಬೂರಿ ಬಾರಿಸುತ್ತಾ, ಸಂತರ, ಶರಣರ ಪದಗಳನ್ನು ಹಾಡುತ್ತಾ ತನ್ನ ಪಾಡಿಗೆ ಇದ್ದ ಸಿದ್ದಜ್ಜನನ್ನು ರಾಜಕೀಯದವರು ಹೈರಾಣಾಗುವಂತೆ ಮಾಡುತ್ತಾರೆ. "ಯಾವ ಊರಿನಲ್ಲಿಯೇ ಆಗಲಿ ಸತ್ತರೆ, ಕೆಟ್ಟರೆ, ಮಕ್ಕಳ ಸಂತಾನವಾದರೆ, ಮಳೆಯಾದರೆ, ಆಗದಿದ್ದರೆ ಅಲ್ಲಿ ಸಿದ್ದಜ್ಜನನ್ನು ಕರೆದು ಕಥೆ ಮಾಡಿಸುತ್ತಿದ್ದರು"[೧೯] ಇಂತಹ ಸಂಪ್ರದಾಯ, ನಂಬಿಕೆಗಳಿಗೆ ಬದ್ಧನಾಗಿ ಬದುಕುತ್ತಿದ್ದ ಸಿದ್ದಜ್ಜ ಹೇಗೋ ಏನೋ ವಿರೋಧ ಪಕ್ಷದವರ ಕೈಗೆ ಸಿಕ್ಕಿ ಬಡವರ ಪರವಾಗಿ, ದಲಿತರ ಪರವಾಗಿ, ಇರುವುದೆಂಬ ಭರವಸೆ ಮೂಡಿಸಲು ಸಿದ್ಧಜ್ಜನ ಹಾಡು ಸಹಕಾರಿಯಾಗುತ್ತದೆ ಎಂಬ ತಂತ್ರದಿಂದ ಬೆಂಗಳೂರಿನ ಬೃಹತ್ ಸಮಾವೇಶಕ್ಕೆ ಕರೆತಂದು ಬಡಕಲಾವಿದನನ್ನು ಸ್ವಾರ್ಥಕ್ಕೆ ಬಳಸಿಕೊಳ್ಳುತ್ತಾರೆ. ಹನೂರರು ಜನಪದ ಕಲೆಗಾರರ ಬದುಕು ವಾಸ್ತವವಾಗಿ ಹೇಗಾಗಿದೆ ಎಂದು ತಿಳಿಸುವ ಪ್ರಯತ್ನ ಮಾಡಿದ್ದಾರೆ. ಇಂತಹ ಪ್ರಸಂಗಗಳೂ ಇಂದಿಗೂ ನಡೆಯುತ್ತಲೇ ಇವೆ. ಬಲಿಷ್ಠ ಶಕ್ತಿಗಳು ಮುಗ್ಧರ ಅಮಾಯಕರ ಜೀವದೊಂದಿಗೆ ಚೆಲ್ಲಾಟವಾಡುವ ಪರಿ ಇಲ್ಲಿ ಚೆನ್ನಾಗಿ ಚಿತ್ರಣಗೊಂಡಿದೆ.

ಹೀಗೆ ವೇದಿಕೆ ಮೇಲೆ ಹಾಡುತ್ತಿದ್ದ ಸಿದ್ದಜ್ಜ ಅದ್ಭುತ ರಾಗದಿಂದ ಎಲ್ಲರನ್ನೂ ಸುಮ್ಮನಾಗಿಸಿದ್ದ, ಆದರೆ ಸಮಾರಂಭಕ್ಕೆ ಬಂದ ಆಡಳಿತ ಪಕ್ಷದ ಹಾವುಗಳು ಸಿದ್ದಜ್ಜನನ್ನು ವೇದಿಕೆಯಿಂದ ಬೀದಿಗೆ ಎಸೆಯುವಂತೆ ಮಾಡಿದವು. ಸಿದ್ದಜ್ಜನ ತಂಬೂರಿ, ಮುಖವೀಣೆ, ಬೆರಳ ಗಗ್ಗರ ಎಲ್ಲವೂ ನುಚ್ಚು ನೂರಾಗಿ ಹೋದವು.

ಬದುಕಿನ ಅತ್ಯಮೂಲ್ಯ ಆಸ್ತಿಗಳು ಹೋದವು ಎಂಬ ಚಿಂತೆ ಸಿದ್ದಜ್ಜನ ಚಿಂತೆಯಾಗಿ ನರಕ ದರ್ಶನವೆಂದು ತಿಳಿದು ರೋದಿಸತೊಡಗಿದ. ರಾಜಕೀಯದ ತಂತ್ರ, ಪ್ರತಿತಂತ್ರಗಳ ಸದುಪಯೋಗ ಪಡೆದುಕೊಳ್ಳುವಂತೆ ಆಡಳಿತ ಪಕ್ಷದ ಮುಖ್ಯಮಂತ್ರಿ, ಸಂಸ್ಕೃತಿ ಸಚಿವ ಕಥೆಯಿಂದ, ಸಿದ್ದಜ್ಜನಿಗೆ ಸೈಟು, ಮನೆ, ಹಣದ ಭರವಸೆಗಳೇ ಮೊಳಗಿದವು. ಆದರೆ ಇದಾವುದೂ ಅವನಿಗೆ ಬೇಕಿರಲಿಲ್ಲ. ತನ್ನ ಜೀವಾಳವಾದ ತಂಬೂರಿಯದೇ ಚಿಂತೆಯಲ್ಲಿ ಮುಳುಗಿದ್ದ.

ಆದರೆ ಮುಖ್ಯಮಂತ್ರಿಗಳು ಕಲಾವಿದರ ಪರ, ಬಡವರ ಪರ ಎಂದು ತೋರಿಸಿಕೊಳ್ಳುವ ಆತುರ, ವಿರೋಧ ಪಕ್ಷಕ್ಕೆ ತಿರುಗೇಟು ನೀಡುವುದೂ ಉದ್ದೇಶವಾಗಿದ್ದರಿಂದ "ನಿಂಗೇನು ಪರಿಹಾರಬೇಕು ಹೇಳಜ್ಜಾ" "ಅಪ್ಪಾ ನಿನ್ನಿಂದ ನಂಗೇನಾಗಬೇಕು, ಕೊಡುವುದು ನೀನಲ್ಲ, ಎಲ್ಲರ್ಗಿಂತಾ ಮ್ಯಾಲಿರೋ ಆ ಪರಮಾತ್ಮ ಕೊಡಬೇಕು". "ಒಂದ್ ಪಕ್ಷ ನೀನು ನಂಗೆ ಕೊಡದೇ ಆದ್ರೆ ಯಾವತ್ತೂ ನನ್ನ ಎದೆಗಂಟಿಕೊಂಡು ಬಂದ ತಂಬೂರಿನೂ, ಗಗ್ರನೂ, ಮುಖವೀಣೆನೂ ಹುಡುಕ್ಸಿ ಕೊಡಪ್ಪ.." ಎಂದು ಕಲೆಯನ್ನು ಉಳಿಸಿ ಬೆಳೆಸುವಂತೆ ಮನವಿ ಮಾಡಿಕೊಂಡ. ಇಲ್ಲಿ ಮುಖ್ಯಮಂತ್ರಿಗಳಿಗೂ, ಸಂಸ್ಕೃತಿ ಸಚಿವರಿಗೂ ಕಲೆ, ಸಂಪ್ರದಾಯ, ಕಲಾವಿದರ ಒಟ್ಟಾರೆ ಈ ಸಂಸ್ಕೃತಿಯ ಅರಿವು ಇಲ್ಲ. ಇದನ್ನು ಕಾಪಾಡಿಕೊಂಡು ಹೋಗುವಂತೆ ಮನವಿ ಮಾಡಿದ ಸಿದ್ದಜ್ಜನ ಮುಂದೆ ಮುಖ್ಯಮಂತ್ರಿಗೆ ಮಾತೂ ಬಾರದೇ, ಇಂತಹ ಸಿದ್ದಜ್ಜನ ಹಾಗೆ ತಾನೂ ಹಾಡಿಕೊಂಡು ಜನರು ನನ್ನನ್ನು ಪ್ರೀತಿಸುವಂತಿದ್ದರೆ ಎಂಬ ಚಿಂತನೆ ಪರಿವರ್ತನೆಯನ್ನು ತೋರುವುದೇ ಆಗಿದೆ. ಅಳಿದು ಹೋಗುತ್ತಿರುವ ದೇಶೀಯ ಚಿಂತನೆಯೂ ಈ ಕತೆಯು ಸಂಸ್ಕೃತಿಯನ್ನು ಉಳಿಸುವ, ಬೆಳೆಸುವ ಭರವಸೆಯನ್ನು ತೋರುತ್ತದೆ.

**ಇರುವುದೆಲ್ಲವ ಬಿಟ್ಟು :**

ಎರೆಡು ವರ್ಷದ ಮಗುವಿನ ಸ್ವಾತಂತ್ರ್ಯದ ಗರಿ ಬಿಚ್ಚಿ ಓಡಾಡುವ ಆಸೆಗೆ ತನ್ನ ತಾಯಿ ನಾಲ್ಕು ಗೋಡೆಯ ಒಳಗಿನ ಸ್ವಾತಂತ್ರ್ಯಕ್ಕೆ ತಳ್ಳುವ ಕತೆಯಾಗಿದೆ. ಒಂದು ಮಗುವಿನ ಹಾವಾ-ಭಾವಗಳನ್ನು ಸೂಕ್ಷ್ಮವಾಗಿ ಅರಿತು ಕತೆ ಹೆಣೆಯಲಾಗಿದೆ. ತನ್ನ ತಾಯಿ ಪಕ್ಕದ ಮನೆ ಸ್ತ್ರೀಯರೊಡನೆ ಗೃಹ ಕೃತ್ಯಗಳನ್ನು ಕುರಿತಾದಂತೆ ನಡೆಸುವ ವ್ಯರ್ಥ ಮಾತುಗಳಿಗಿಂತ, ತಾನು ಅವಳ ಕಣ್ಣುತಪ್ಪಿಸಿ ಗೇಟಿನಿಂದಾಚೆ ತಾನು ಬಂದಿರುವುದನ್ನು ತಾಯಿ ನೋಡಿಬಿಡುವಳೇನೊ, ಎಲ್ಲಿ ತನ್ನನ್ನು ಮತ್ತೆ ಗದರಿಸಿ ಬೈಯ್ಯುವಳೆಂಬ ಚಿಂತೆ ಮೂಡಿತು. ಹಸಿರು ತಂಬಿದ್ದ ಗಿಡಮರಗಳನ್ನು, ಹೂವುಗಳನ್ನು ಆ ಮಗು "ಆದರೆ ತನ್ನ ಕಣ್ಣಮುಂದೆ ಇರುವ ಬಣ್ಣದ ಹೂವಿನಲ್ಲಿ ಚಿಟ್ಟೆ ತನಗೆ ತಾನೇ ಆಡುತ್ತಿದೆ. ಎಲ್ಲಿ ಬೇಕೆಂದರಲ್ಲಿ ಹಾರಾಡುತ್ತಿದೆಯಲ್ಲ! ಅದರಂತೆ ತಾನೂ ಹಾರಿ ಹಾರಿ ಎತ್ತೆತ್ತಲೊ ಹೋಗಬೇಕೆನಿಸಿತು"[೨೧] ಮಗುವಿನ ಮುಗ್ಧತೆಯ ಬಗೆಗೆ ಕಥೆಗಾರರು ಹಂತ ಹಂತದಲ್ಲೂ ಅವಲೋಕಿಸಿದ್ದಾರೆ. ತಾನು ನಿಂತರೆ ಬಿದ್ದು ಬಿಡುತ್ತೇನೆ, ನಾನು ಹಾರಲಾಗುವುದಿಲ್ಲ. ಅದರ ಬದಲು ಅಂಬೆಗಾಲಿನ ಪ್ರಯಾಣವೇ ಸರಿ ಎಂದು

ಮನದಲ್ಲೇ ಸರಿ ತಪ್ಪುಗಳ ಲೆಕ್ಕಾಚಾರ ಹಾಕಿಸುವ ಕತೆಗಾರರು ಮಗುವಿನಲ್ಲಿಯೇ ಅರಿವು ಕಂಡಿದ್ದಾರೆ. ಆದರೆ ಶಾರಿಯ ತಾಯಿ ಪಕ್ಕದ ಮನೆಯ ಹೆಂಗಸರು ಸೇರಿ ತಮ್ಮ ಮದುವೆಯ ಹಿಂದಿನ ದಿನಗಳು, ಈಗಿನ ದಿನಗಳನ್ನು ಹೋಲಿಕೆ ಮಾಡಿ, ಧಾರಾವಾಹಿಯ ವಿಮರ್ಶೆ ಮಾಡುವ ಮಾತುಗಳನ್ನು ಹನೂರರು ವಿಡಂಬನೆ ಮಾಡುವ ಪ್ರಯತ್ನ ಮಾಡಿದ್ದಾರೆ.

ಇತ್ತ ಮನೆಯ ಈಚೆಗೆ ಬಂದ ಶಾರಿ ಕಲ್ಲು ಸೇತುವೆ ಮೇಲೆ ಕುಳಿತು ಪಾರಿಜಾತ ಹೂವುಗಳನ್ನು ಆರಿಸುತ್ತಾ, ಇರುವೆಗಳ ಭಯದಿಂದ ಮುಟ್ಟದೇ ದೂರದಿಂದಲೇ ನೋಡಿ, ಅಲ್ಲೇ ಇದ್ದ ನಾಯಿ ಮತ್ತು ಅದರ ಮರಿಗಳು ಆಟವಾಡುವುದನ್ನು, ಮರದ ಮೇಲೆ ಕುಳಿತು ನೋಡುವ ಬೆಕ್ಕು ಹೀಗೆ ಎಲ್ಲವನ್ನು ನೋಡುತ್ತಾ ಅವುಗಳ ಸ್ವಾತಂತ್ರ್ಯವನ್ನು ನೋಡುತ್ತಾಳೆ. ಹನೂರರು ಮಗುವಿನ ಸುತ್ತಲೂ ತೋರುವ ಸಹಜ ಪರಿಸರದ ವಿವರಣೆಗಳು ಸಂಪೂರ್ಣ ಸ್ವಾತಂತ್ರ್ಯ ಉಳ್ಳವು. ಇಂತಹ ಸ್ವಾತಂತ್ರ್ಯದಲ್ಲಿ ತಾನೂ ಪಾಲುದಾರಳಾಗಬೇಕೆಂಬ ಶಾರಿ ಪುಟ್ಟಿಯ ಬಯಕೆ ಸಹಜವೆನಿಸುತ್ತದೆ. ನಗರೀಕರಣದ ಗುಂಗಿನಲ್ಲಿರುವ ಹೆಂಗಸರಿಗೆ ಸಹಜ ನೈಸರ್ಗಿಕ ಬದುಕಿಗಿಂತ, ಆಟದ ಗೊಂಬೆಯಲ್ಲಿ, ಟಿ.ವಿ ಯಲ್ಲಿ ಸಿಗುವ ನಾಟಕೀಯ ಸಂತೋಷದ ಕಡೆಗೆ ಒಲವು ಹೆಚ್ಚಾಗುತ್ತಿದೆ ಎಂಬುದನ್ನು ಹೇಳುವ ಪ್ರಯತ್ನ ಮಾಡಿದ್ದಾರೆ.

ಹನೂರರು 'ಇರುವುದೆಲ್ಲವ ಬಿಟ್ಟು' ಎಂಬ ಶೀರ್ಷಿಕೆಯಲ್ಲಿ ಸಹಜ ಪ್ರೀತಿ, ಸ್ವಾತಂತ್ರ್ಯವನ್ನು ಅಡಗಿಸುವ ಪ್ರಯತ್ನ ಮಾಡಿದ್ದಾರೆ. ಒಂದು ಮಗುವಿಗೆ ಬೇಕಾದ ಜಗತ್ತು ಬೇರೆಯೇ ಆಗಿದೆ. ಅದರ ಬದಲು ನಮ್ಮ ಒತ್ತಡಗಳನ್ನು ಅವುಗಳ ಮೇಲೆ ಹೇರುವ ಆಧುನಿಕ ಜೀವನವನ್ನು ಟೀಕಿಸಿದ್ದಾರೆ. ಒಟ್ಟಾರೆ ಈ ಕತೆಯು ಮಗುವಿನ ಮೇಲಾಗುತ್ತಿರುವ ಬದಲಾವಣೆಯ ಪರಿಸರದ ವಿರುದ್ಧ ಪರಿಣಾಮಕಾರಿಯಾಗಿ ಅಭಿವ್ಯಕ್ತಿಸುವ ಪ್ರಯತ್ನವಿದೆ.

**ಕವಿ ಮತ್ತು ಕಾಜಾಣ :**

ಕವಿ ಕುವೆಂಪು ಅವರ ಪ್ರಕೃತಿ ಪ್ರೇಮವನ್ನು, ಅವರ ವ್ಯಕ್ತಿತ್ವವನ್ನು ಕುರಿತು ಹೇಳುವ ಕತೆಯಾಗಿದೆ. ಹನೂರರು ಒಬ್ಬ ನಿರೂಪಕರಾಗಿ ತಾವು ರಸಋಷಿಯನ್ನು ಭೇಟಿ ಮಾಡಿದ ಅಮೂಲ್ಯ ಕ್ಷಣಗಳನ್ನು ಬರವಣಿಗೆಯಲ್ಲಿ ಸೆರೆಹಿಡಿದಿದ್ದಾರೆ. ಇಲ್ಲಿ ಗುರು–ಶಿಷ್ಯರ ಬಾಂಧವ್ಯವಿದೆ, ತಮ್ಮ ಗುರುಗಳು ಮೇಲೇಳಲಾಗದಷ್ಟು ಹಸನಾಗಿಲ್ಲ ಎಂಬ ಸುದ್ದಿ ತಿಳಿದು ಮೈಸೂರಿನ ಅವರ ಒಂಟಿಕೊಪ್ಪಲಿನ ಮನೆಗೆ ಹೋಗುವಾಗ ಹಳೆಯ ನೆನಪುಗಳು ಕಾಡುತ್ತವೆ. ಕವಿಯಾದವರ ಪ್ರಕೃತಿ ಪ್ರೇಮ ಅಪಾರವಾದುದು. ಒಮ್ಮೆ ತಾವು ಓಡಾಡುವ ಉದ್ಯಾನವನದಲ್ಲಿ ಗಿಳಿಮರಿಗಳಿ ಕಾಣದಾಗಿ, ಅವನ್ನು ಗಿಳಿಶಾಸ್ತ್ರದವ ಹಿಡಿದು ತನಗೆ ಬೇಕೆಂದು ಹೋದನು ಎನ್ನುತ್ತಾರೆ ಅದಕ್ಕೆ ಕುವೆಂಪು ಅವರು "ಹಾಗೆ ಆ ಶಾಸ್ತ್ರದವ ಗಿಳಿಗಳ ಸಂಸಾರ ಹೊತ್ತೊಯ್ಯುವಲ್ಲಿ ನೀನು, ಇವು ವಿದ್ಯಾಮಂದಿರಲ್ಲಿ ವಾಸವಾಗಿರುವ ಗಿಳಿಗಳು ನಿನ್ನ ಬಿಲ್ಲುಬಾಣ ಬತ್ತಳಿಕೆಗೆ ಇಲ್ಲಿ

ಅವಕಾಶವಿಲ್ಲ ಅಂತ ಹೇಳಬೇಕಿತ್ತು"[೨೨] ಎಂದರು. ಹನೂರರು ಕುವೆಂಪು ಅವರ ಶಿಷ್ಯರಾಗಿ ಪ್ರಕೃತಿಯನ್ನು ಸವಿಯಬಲ್ಲವರಾಗಿದ್ದರು. ಹಾಗಾಗಿ ಕುವೆಂಪು ಅವರ ಅಂತರಾಳದ ಮಾತುಗಳು ಸ್ಪಂದಿಸುತ್ತಿದ್ದವು.

ತಮ್ಮ ಉದ್ಯೋಗ ಖಾಯಂ ಗೊಳಿಸುವಾಗ ಗುರುಗಳು ಪರೀಕ್ಷಿಸುವ ವೈಖರಿಯೇ ತುಂಬಾ ಭಿನ್ನವಾದುದು. "ಗುರುವಿನ ಬೋಧನೆಗಿಂತ ವಿದ್ಯಾರ್ಥಿಗಳಿಗೆ ತಮ್ಮೊಳಗೆ ಬೆಳೆಯಬೇಕಾದ ಅರಿವು ಬಹಳ ಮುಖ್ಯ"[೨೩] ಎಂದು ತನ್ನ ಶಿಷ್ಯನ ಅರಿವು ಮೊದಲೇ ತಿಳಿದಿರುವ ಕಾರಣ ಮತ್ತೇ ಪರೀಕ್ಷಿಸುವ ಅಗತ್ಯ ಇಲ್ಲ ಎನಿಸುತ್ತದೆ. ಹಾಗಾಗಿ ಗುರುಗಳು ಎತ್ತರದ ಸ್ಥಾನದಲ್ಲಿ ನಿಲ್ಲುತ್ತಾರೆ. ಬರವಣಿಗೆಯ ಉದ್ದೇಶದಿಂದಲೇ ಒಂಟಿಕೊಪ್ಪಲಿನ ಪ್ರಕೃತಿ ಮಡಿಲಿಗೆ ಹೋಗಿ ವಾಸವಾಗಿದ್ದ ರಸಋಷಿ ಕುವೆಂಪು ಅವರಿಗೆ ಈಗ ಸುತ್ತೆಲ್ಲವೂ ಕಾಂಕ್ರೀಟ್ ಕಾಡು ಹಬ್ಬಿದ್ದು ಬೇಸರದ ಸಂಗತಿಯೇ ನಿಜ. ಬದಲಾವಣೆಯು ಉತ್ತೇಜನಕ್ಕೆ ಕಾರಣವಾಗದೆ ಸಮಾಜವನ್ನು ಆತಂಕಕ್ಕೆ ಈಡು ಮಾಡುತ್ತಿರುವುದನ್ನು ಹನೂರರು ಓದುಗರ ಮುಂದಿಡುತ್ತಾರೆ. ಕಾಜಾಣದ ಸದ್ದು ಕೇಳಿ ಎಷ್ಟೋ ಕಾಲವಾಯಿತೆಂಬ ಕುವೆಂಪು ಅವರ ನೋವು ಕಾಡುತ್ತದೆ. ನೈಜತೆಯನ್ನು ಯಂತ್ರಗಳು ನಾಶಮಾಡುತ್ತಿವೆ ಎಂಬ ಕೊರಗು ಅವರಲ್ಲಿತ್ತು. ಹಾಗಾಗಿ ಪ್ರಕೃತಿಯ ಸಹಜ ಸೌಂದರ್ಯವು ಆಸ್ವಾದಿಸುವ ನಿಜವಾದ ಕವಿಗೆ ಮಾತ್ರ ತಿಳಿಯುವಂತಹದ್ದು. ಕಾಜಾಣಗಳ ಸದ್ದು ಮನಮೋಹಕವಾಗಿ ಕೇಳುವಂತಹದ್ದು. ಎಲ್ಲರೂ ಪ್ರಕೃತಿಯ ಕೂಸಾಗಬೇಕು. ಮನುಷ್ಯ ಕೇವಲ ಮನುಷ್ಯನಾಗಿ ಬದುಕದೆ, ನಿಸರ್ಗಕ್ಕೂ ಬದುಕಬೇಕು. ಸೃಜನಶೀಲತೆಗೆ ಮೂಲ ಬೇರು ಈ ಪ್ರಕೃತಿ. ಇದು ನಾಶವಾಗುತ್ತಾ ಹೋಗುತ್ತಿರುವುದನ್ನು ಕಥೆಗಾರರು ವ್ಯಂಗ್ಯ ಮಾಡಿದ್ದಾರೆ.

ಒಟ್ಟಾರೆ ಈ ಕತೆ 'ಕವಿ ಮತ್ತು ಕಾಜಣ'ಕ್ಕೆ ಮೀಸಲಾಗದೆ 'ವ್ಯಕ್ತಿ ಮತ್ತು ಪರಿಸರ'ದ ನಡುವಿನ ನಂಟನ್ನು, ಅವಶ್ಯಕತೆಯನ್ನು ಹೇಳುವಲ್ಲಿ ಯಶಸ್ವಿಯಾಗಿದೆ.

**ಕಣ್ಣು ತೆರೆಸುವುದೆಂದರೆ... :**



ಈ ಕತೆಯು ಒಬ್ಬ ಬುಡೇನ್ ಸಾಬಿಯ ಸುತ್ತಲೇ ಸುತ್ತುತ್ತ ಅವನ ವ್ಯಕ್ತಿತ್ವವನ್ನು ಆತ್ಮ ವಿಮರ್ಶೆಗೆ ಒಳಪಡಿಸುತ್ತಾ, ಓದುಗರನ್ನು ಒಂದು ಚಿಂತನೆಗೆ ಒಳಪಡಿಸುವ ಕತೆಯೆ 'ಕಣ್ಣು ತೆರೆಸುವುದೆಂದರೆ..'. ಮೊದಲ ಓದಿಗೆ ಈ ಕತೆಯು ತನ್ನನ್ನು ತಾನು ತೆರೆದುಕೊಳ್ಳುವುದೇ ಇಲ್ಲ. ಹಾಗಾಗಿ ಈ ಕತೆ ಯಾರ ಕಣ್ಣನ್ನು ತೆರೆಸುತ್ತದೆ ಎಂಬುದು ಪ್ರಶ್ನೆ? ಬುಡೇನ್‌ಸಾಬಿ ಮದುವೆಯಾಗದೆ ಒಂಟಿತನದಿಂದ ಬದುಕುವ ನಿಷ್ಕಲ್ಮಶ ಪಾತ್ರ. ಇಂತಹ ನಿರ್ಲಕ್ಷ್ಯಕ್ಕೊಳಗಾದವರು ನಮ್ಮ ಕಣ್ಣ ಮುಂದೆ ಕಾಣುತ್ತಾರೆ. ಈ ಕತೆಯಲ್ಲಿ ಬುಡೇನ್ ಸಾಬಿಯ ವ್ಯಕ್ತಿತ್ವದ ಮುಂದೆ ಉಳಿದ ಪಾತ್ರಗಳು ಮಂಕಾಗಿ, ಚಿಕ್ಕವರಾಗಿಬಿಡುತ್ತಾರೆ. ಜಾತಿಯಲ್ಲಿ ಮುಸ್ಲಿಂನಾದರೂ ವೇದಗಳ, ಕೀರ್ತನೆಗಳ ಬಗ್ಗೆ ಗೌರವಿಸಿ ಹಾಡುವ ಈತನನ್ನು ತಲೆ ಸರಿಯಿಲ್ಲ ಎಂದು ಹೇಳುವ ಜನ ಕಣ್ಣು

ತೆರೆಯುವ ಪ್ರಯತ್ನವನ್ನೆ ಮಾಡುವುದಿಲ್ಲ ಆದರೆ ಕಲ್ಲಣ್ಣ ಮಾತ್ರ ತನ್ನನ್ನು ತಾನೇ ಪ್ರಶ್ನಿಸಿಕೊಳ್ಳುವ ಪ್ರಯತ್ನ ಮಾಡಿದ್ದಾನೆ.

ಕತೆಯಲ್ಲಿ ಬರುವ ಸರಳ ಮದುವೆಯ ಚಿಂತನೆಯು ಸಮಾಜಮುಖಿಯಾದುದು, ಆದರೆ ನುಡಿದಂತೆ ನಡೆಯುವುದು ಮನುಷ್ಯನ ಜಾಯಮಾನದ್ದೇ ಅಲ್ಲ. ಹಾಗಾಗಿ ಆಡಂಬರದ ಮದುವೆ ನನಗಾಗಿ ಅಲ್ಲ ನಮ್ಮ ಬೀಗರಿಗಾಗಿ ಎಂದು ಕಲ್ಲಣ್ಣ ಹೇಳುವುದು ಪಲಾಯನವಾದವೇ ಸರಿ. ಗಾಂಧೀ ಇರುವ ನೋಟು ಬುಡೇನ್ ಸಾಬಿಗೆ ಇಷ್ಟ, ಮಹಾತ್ಮರು ಇಲ್ಲದ ನೋಟಿಗೆ ಬೆಲೆಯಿಲ್ಲ ಹಾಗಾಗಿ ಗಾಂಧೀ ತತ್ವ ಅಳವಡಿಸಿಕೊಳ್ಳದ ಯಾವ ವ್ಯಕ್ತಿಯೂ ವ್ಯಕ್ತಿಯೇ ಅಲ್ಲವೆನ್ನುತ್ತಾನೆ. ಆದರೆ ಊರು ಜನರು ಗಾಂಧೀಜಿಯ ಬಗ್ಗೆ ಅಗೌರವ, ಅಪಹಾಸ್ಯ ಮಾಡುವುದನ್ನು ಹನೂರರು ವಿಡಂಬನೆ ಮಾಡಿದ್ದಾರೆ.

ಅಕ್ಷರವನ್ನು ಓದದೇ ಹೋದರೂ, ವಿದ್ಯಾವಂತನಾಗಿದ್ದ ಸಾಬಣ್ಣ ಬಲವಂತವಗಿ ಮಕ್ಕಳನ್ನು ಶಾಲೆಗೆ ಎಳೆದೊಯ್ಯುತ್ತಾನೆ. ಸಾಬಣ್ಣ ಆಡುವ ಮಾತುಗಳಿಂದ ಅವನನ್ನು 'ಬೆಗ್ಗರು' ಎಂದು ಹೇಳುವ ಒಬ್ಬ ವಿದ್ಯಾರ್ಥಿ ಅನಾಗರೀಕನಂತೆ ಕಾಣುತ್ತಾನೆ. ಹಿಮಾಲಯದ ಚಿತ್ರಣ ಸಾಬಣ್ಣನಿಗೆ ದೇವರ ವಾಸವಾಗಿ, ಶ್ರೇಷ್ಟವಾಗಿ ಕಂಡರೆ ಪಂಕಜಳಿಗೆ ಅದು ತನ್ನ ಶ್ರೀಮಂತಿಕೆಯ ಸಂಕೇತವಾಗಿ ಕಾಣುತ್ತದೆ.

ಇಲ್ಲಿ ನಾಗರೀಕ ಜನಾಂಗ ಮತ್ತು ಜನಪದರ ನಡುವಿನ ಮಧ್ಯೆ ಸಾಬಣ್ಣ ತೀರ ಭಿನ್ನವಾಗಿ ಕಾಣುತ್ತಾನೆ. ಹೂವುಗಳ ಅಂದ ಚೆಂದವನ್ನು ಕಾವ್ಯವಾಗಿಸಿ ಹಾಡುವ ಹಾಡು ಜನಗಳಿಗೆ ಅವರ ಮನಸ್ಸಿನಲ್ಲಿರೊ ವಿಕೃತ ಕಾಮನೆಗಳು, ಸಾಬಣ್ಣನಲ್ಲಿಯೂ ಇದೆ ಎಂದು ತಿಳಿಯುತ್ತಾರೆ. ಗಾಂಧೀಜಿಯನ್ನು ಹೊಗಳುವುದು ಹಣ ಸಂಪಾದನೆಗೆ ಎಂಬ ಕೀಳರಿಮೆ ಜನರಲ್ಲಿ ಮೂಡುತ್ತದೆ. ಮದುವೆಗೆ ಬರುವ ಜನರ ಆಡಂಬರಗಳ ನಡುವೆ ಸಾಬಣ್ಣ ಸಹೃದಯಿಯಾಗಿ ಕಾಣುತ್ತಾನೆ.

ಕಲ್ಲಣ್ಣನಿಗೆ ಸಾಬಣ್ಣನ ಮೇಲೆ ಅಭಿಮಾನ ಮೂಡುತ್ತದೆ. ತನ್ನ ಬದುಕಿಗೊಂದು ದಾರಿಯಾಗಲು ಸಾಬಣ್ಣನೇ ಕಾರಣವೆಂದು ಸಂತುಷ್ಟರಾಗುತ್ತಾರೆ. ಅವನ ವ್ಯಕ್ತಿತ್ವದ ಮುಂದೆ ತಮ್ಮ ಅರೆಬೆಂದ ಜ್ಞಾನ ಎಚ್ಚರಗೊಳ್ಳುತ್ತದೆ. ಸಾಬಣ್ಣನು ಎಲ್ಲರಿಗಿಂತ ಉತ್ತಮನು ಎಂಬುದಕ್ಕೆ ಆತ ಬಸ್ಸಿನ ಮೇಲೆ ಕುಳಿತು ಸಾಗುವುದು ಸಾಂಕೇತಿಕವಾಗಿ ಸೂಚಿಸುತ್ತದೆ. ಒಟ್ಟಿನಲ್ಲಿ ಇಂತಹ ವ್ಯಕ್ತಿತ್ವದ ಪಾತ್ರಗಳಿಂದ ಸಮಾಜದ ವಾಸ್ತವ ಪರಿಸ್ಥಿತಿಗಳನ್ನು ಅವಲೋಕಿಸಿರುವ ಕಥೆಗಾರರು ತರ್ಕಬದ್ಧವಾಗಿ ನಿರೂಪಣೆ ಮಾಡಿದ್ದಾರೆ.

**<u>ಸುವರ್ಣ ಇತಿಹಾಸ :-</u>**

ಸಿರುಮಜ್ಜನ ನಿಜವಾದ ಅನುಭವದ ಮುಂದೆ ಸತ್ಯನಾಥರ ಐತಿಹಾಸಿಕ ಶೋಧ, ಸಂಶೋಧನೆಗಳು ಪೊಳ್ಳು ಎನಿಸುವುದು ಈ ಕತೆಯ ಸಾರಾಂಶ. ಸತ್ಯನಾಥರು ಆನೆಗುಂದಿದುರ್ಗದ ಸುತ್ತಿನ ಒಂದು ಕುಗ್ರಾಮದವರು. ಓದಿ ವಿದ್ಯಾಭ್ಯಾಸ ಮುಗಿಸಿ ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿದ್ದರು. ಈಗ

ನಿವೃತ್ತಿಯಾಗಿ ತಮ್ಮ ಸಂಶೋಧನೆ, ಬರವಣಿಗೆಯನ್ನು ಪ್ರವೃತ್ತಿ ಎಂಬಂತೆ ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಸೃಜನಶೀಲ ಬರವಣಿಗೆಯಿಂದ ಕಾದಂಬರಿಕಾರರಾಗಿ, ಕೋಟೆ ಆಳಿದ ಅರಸುಗಳನ್ನೆಲ್ಲಾ ಕುರಿತು ಇತಿಹಾಸವನ್ನೊಳಗೊಂಡ ಕಾದಂಬರಿಗಳನ್ನು ರಚಿಸಿ ಹೆಸರಾಗಿದ್ದಾರೆ.

ಹಳೆಯ ಇತಿಹಾಸವನ್ನು ಮರುನೆನಪು ಮಾಡುವ ಸೃಜನಶೀಲ ಬರವಣಿಗೆಯು ಎಲ್ಲರ ಮನ ಗೆದ್ದದ್ದು ಅವರ ಸಾಹಿತ್ಯದ ಶ್ರೇಷ್ಠತೆಯೇ ಸರಿ. ಆದರೆ ಅವರನ್ನು ಅಭಿನಂದಿಸುವ ಸಮಾರಂಭಕ್ಕೆ ಸಂಸ್ಕೃತಿ ಸಚಿವರು ಬರದೇ ಹೋದದ್ದು ಸಾಹಿತ್ಯದ ಮೇಲಿನ ನಿರಾಸಕ್ತಿ ಎಂದು ಕಥೆಗಾರರು ವ್ಯಂಗ್ಯಮಾಡಿದ್ದಾರೆ. ರಾಜಕೀಯ ಹಾಗೂ ಸಾಹಿತ್ಯ ಕ್ಷೇತ್ರಗಳೆರಡೂ ಸಂಸ್ಕೃತಿಯ ಪಾಲನೆ ಹೊತ್ತುಕೊಂಡಿರುವ ಕ್ಷೇತ್ರಗಳೇ ಆದರೂ ಸಾರ್ಥಕತೆ ಕಂಡುಕೊಳ್ಳದಿರುವುದು ದುಸ್ಥರವೆಂದಿದ್ದಾರೆ. ಸತ್ಯನಾಥರು ವೈಯಕ್ತಿಕವಾಗಿ ಬದುಕನ್ನು ಕಳೆದುಕೊಂಡವರು. ಹಾಗಾಗಿ ಹೆಂಡತಿ, ಮಕ್ಕಳಿಂದ ದೂರಾಗಿ ಒಂಟಿತನದ ಬದುಕು ಕಳೆಯಬೇಕಾಗಿದೆ. ಸಮಾರಂಭ ಮುಗಿಸಿಕೊಂಡು ಸಿರುಮಜ್ಜನ ಮನೆಗೆ ಬಂದಾಗ ಏಕವಚನದ ಸಂತಸ ನೀಡುತ್ತದೆ. ಆತ್ಮೀಯ ಸಂಬಂಧಗಳು, ಸ್ನೇಹಗಳು ಬೆಳೆದು ಕಾಣುವುದು ಇಲ್ಲೆ. ಹಾಗಾಗಿ ಸತ್ಯನಾಥರು ಸಿರುಮಜ್ಜನ ಮಾತು, ಉಪಚಾರದಲ್ಲಿ ಕೃತಜ್ಞತೆಯೂ ಇಲ್ಲದಿರುವುದನ್ನು ಕಂಡು ಸಂತಸ ಪಡುತ್ತಾರೆ. ಹಣ ಖರ್ಚು ಮಾಡಿದ ಸಮಾರಂಭಕ್ಕಿಂತ, ಬಡವ ಸಿರಮಜ್ಜನ ಉಪಚಾರವೇ ಸಮಾಜಿಕವಾಗಿ ಹೆಚ್ಚೆನಿಸುತ್ತದೆ.

ಆಕಸ್ಮಿಕವಾಗಿ ಸಿರುಮಜ್ಜನ ಗುಡಿಸಲಲ್ಲಿ ಕಾಣುವ ರಾಜರ ಖಡ್ಗ, ಬಳೆಗಳು ಸತ್ಯನಾಥರ ಕುತೂಹಲಕ್ಕೆ ಕಾರಣವಾಗುತ್ತದೆ. ಇದು ನಿಜವಾದ ಸಂಶೋಧಕನ ಶಾಶ್ವತ ಗುಣ. ಅದಕ್ಕೆ ಸಿರುಮಜ್ಜ ತನ್ನ ಅಜ್ಜಿ ಚಿನ್ನವ್ವನನ್ನು ರಾಜರು ಒಲಿದು ಅವಳನ್ನು ಒಲಿಸಿಕೊಳ್ಳಲು ಕೊಟ್ಟ ಬಳೆ ಅದು. ಆದರೆ ತನ್ನ ಅಜ್ಜಿ ಖಡ್ಗದಿಂದ ಪ್ರಾಣಕಳೆದುಕೊಂಡಳು ಎಂದು ಇತಿಹಾಸ ಹೇಳುತ್ತಾನೆ. ಇದು ಗ್ರೀಕ್ ರುದ್ರನಾಟಕಗಳನ್ನು ನೆನಪು ಮಾಡುತ್ತದೆ. ಅಸಹಾಯಕ ಸ್ಥಿತಿಯಲ್ಲಿ ಗಂಡನಿಗೆ ದ್ರೋಹ ಎಸಗಲಾರದೆ ತಾನು ಕತ್ತಿ ನೆಟ್ಟು ತನ್ನ ದೇಹವನ್ನು ಸಮರ್ಪಿಸಿಕೊಂಡಳು. ಇದು ಭಾರತೀಯ ಸಂಸ್ಕೃತಿಗೆ ಒಳಪಟ್ಟ ಹೆಣ್ಣಿನ ನೈಜ ವರ್ತನೆಯಾಗಿದೆ. ಇಂತಹ ಇತಿಹಾಸವು ಸುವರ್ಣ ಇತಿಹಾಸಗಳಾಗಿ ಇಂದಿಗೂ ಉಳಿದಿದೆ.

ಇದನ್ನು ತಿಳಿದ ಸತ್ಯನಾಥರು ತಮ್ಮ ಸಂಶೋಧನೆ, ಸಾಹಿತ್ಯಗಳು ಇದರ ಮುಂದೆ ಸುಳ್ಳಾಯಿತೆಂದು ತಿಳಿಯುವಷ್ಟರಲ್ಲೇ "ಸತ್ಯಪ್ಪಾ ಸಮುದ್ರ ಹಾಯಕೆ ಹಡಗದೆ ಅಂತರೆ, ಹೊಳೆ ಹಾಯಕೆ ದೋಣಿ ಅದೆ. ಹೆಂಡ್ರನ್ನ ಕಳಕಂಡವುರು, ಗಂಡನ್ನ ಕಳಕಂಡವುರು, ಮಕ್ಕಳನ್ನು ಕಳಕಂಡವುರು, ಅಪ್ಪ ಅವ್ವಂದಿರ ಕಳಕಂಡ ಮಕ್ಳು ಅಲ್ದೆನೆ ಅನ್ನವಿಲ್ದವುರ ಕಣ್ಣೀರ ಕಡೆ ಹಾಯ್ಸಕೆ ಏನಿದೆ? ಕಾಲಾನುಕಾಲದಿಂದಲೂ ಯಾರಾದರೂ ಏನಾರ ಕಂಡುಹಿಡಿದಿದ್ದರ ಸತ್ಯಪ್ಪಾ"[೨೪] ಎಂಬ ಪ್ರಶ್ನೆಗೆ ಉತ್ತರ ಹೇಳಲಾಗದ ಸಂದರ್ಭ ಸತ್ಯನಾಥರದು.

ಇಂದು ಓದಿ ನಾಳೆ ಮರೆಯುವ ಸಾಹಿತ್ಯ, ಸಂಶೋಧನೆಗಿಂತ ಎಂದಿಗೂ ಮರೆಯದ ಬದುಕಿನ ಮೌಲ್ಯಗಳೂ ಮುಖ್ಯ. ಯಾವುದೇ ಪ್ರತಿಫಲಾಪೇಕ್ಷೆ ಇಲ್ಲದ ಕಾಲದಲ್ಲಿ ವೀರಗಲ್ಲು, ಮಾಸ್ತಿಗಲ್ಲುಗಳು ಸುವರ್ಣ ಇತಿಹಾಸಗಳಾದವೇ ವಿನಃ ಇಂದು ಕೇವಲ ರಾಜಕೀಯ ದುರುದ್ದೇಶದಿಂದ ಅಭಿನಂದನೆ, ಪ್ರಶಸ್ತಿ ನೀಡುವುದು ಸುವರ್ಣ ಇತಿಹಾಸವಿರಲಿ, ವರ್ತಮಾನದಲ್ಲೂ ನೆನಪಿನಲ್ಲಿ ಉಳಿಯದು ಎಂದು ಈ ಕತೆಯು ಸಂಸ್ಕೃತಿಯ ಉಳಿವು ನಡವಳಿಕೆಯೇ ಆಗಿದೆ ಎಂದು ಹೇಳುತ್ತದೆ.

**ಸಾವಧಾನವ ಮೀಟಿದ ಅಳು :-**

ಬುಡಕಟ್ಟು ಜನಾಂಗದವರ ಮೇಲಾಗುತ್ತಿರುವ ಶೋಷಣೆಯನ್ನು, ರಾಜಕೀಯದ ಕುತಂತ್ರವನ್ನು, ಕೋಮುಸೌಹಾರ್ದತೆ ಕೆಟ್ಟು ಇಡೀ ಗ್ರಾಮವೇ ಸೇಡಿನ ಜ್ವಾಲೆಗೆ ತುತ್ತಾಗಿದ್ದ ಮನಃಕರಗುವ ಕತೆಯನ್ನು ಇಲ್ಲಿ ಕಟ್ಟಿಕೊಡಲಾಗಿದೆ. ಹನುಮ ತೀರ್ಥದ ತೊರೆಯು ಹತ್ತಾರು ಗ್ರಾಮಗಳಿಗೆ ಶುದ್ಧ ಕುಡಿಯುವ ಜಲದ ಮೂಲವಾಗಿತ್ತು. ಪ್ರಕೃತಿಯ ಸುಂದರ ತಾಣವಾಗಿ ಇದ್ದರೂ ಅಲ್ಲಿನ ಜನರ ಅಹಂಕಾರದ ಅಮಲಿನಲ್ಲಿ ಗ್ರಾಮವೇ ಶಾಂತಿ ಕಳೆದುಕೊಂಡಿತ್ತು. ಇದಕ್ಕೆ ಕಾರಣ ಊರ ಶ್ರೀಮಂತ ಕೆಂಪರಸಯ್ಯ ತೊರೆಯ ನೀರಿಗೆ ಭೂತಾಳೆ ಪಟ್ಟೆಯನ್ನು ಹೆಚ್ಚಿನ ಸಂಖ್ಯೆಯಲ್ಲಿ ಸುರಿಸಿದ್ದು, ಇದರಿಂದ ನೀರೆಲ್ಲವೂ ವಾಸನೆ ಬಂದು ಕಹಿಯಾಗಿ ಕುಡಿಯಲು ಆಗದೆ ಅಸಹ್ಯ ಹಿಡಿಸಿತ್ತು.

ಇದು ಬುಡಕಟ್ಟು ಜನರಲ್ಲಿ ಕೋಪಕ್ಕೆ ಕಾರಣವಾದದ್ದು ಸಹಜ, ತಮಗಾದ ತೊಂದರೆಯ ವಿರುದ್ಧ ಪ್ರತಿಭಟಿಸುವುದು ಸಾಮಾಜಿಕ ನ್ಯಾಯ. ಮೊದಲ ಕಥಾ ಸಂಕಲನದಲ್ಲಿದ್ದ ಶಾಂತ ಪ್ರತಿಭಟನೆಗೂ ಈ ಕತೆಯ ನೇರ ಪ್ರತಿಭಟನೆಗೂ ಬದಲಾವಣೆ ಇದೆ. ಬುಡಕಟ್ಟು ಹುಡುಗರು ಬಂದು ಕೆಂಪರಸಯ್ಯನವರನ್ನು ಕೇಳಿದರೂ ತಕ್ಷಣದ ಉತ್ತರ ಸಿಗದ ಕಾರಣ ದೊಡ್ಡಸ್ತಿಕೆಯೇ ಆಗಿತ್ತು. ಇದೆಲ್ಲದಕ್ಕೂ ಕಾರಣ ಎಮ್ಮೆಲ್ಲೆ ಚುನಾವಣೆಯ ಸೋಲು ಗೆಲುವಿನ ಪರಿಸ್ಥಿತಿಯೆ ಆಗಿತ್ತು. ಅದಕ್ಕೆ 'ನಿಮ್ಮಡೆ ಎಮ್ಮೆಲ್ಲೆ ಗೆದ್ದು ವೋಬಳಿನೆಲ್ಲ ನೆಡುಸ್ತಾವನೆ ಅಂತ ಇಲ್ಲಿ ಬಂದು ನನ್ನ ಮುಂದೆ ಹುಟ್ಟೆ ಇದ್ದ ಮೀಸೆನೆ ತಿರಿತಿರೇನ್ರಯ್ಯ.. ನಾಳಿಕೆ ನಮ್ ಕಡೆಯವನೂ ಗೆದ್ದು ಬತ್ತಾನೆ. ಅಧಿಕಾರ ಅಂಬುದು ತಕ್ಕಡಿ ತಟ್ಟೆ ಕಣ್ರಯ್ಯಾ"[೨೫] ಎಂಬ ರಾಜಕೀಯದ ಬಣ್ಣ ಬಳಿದ ಕೆಂಪನರಸಯ್ಯ ತನ್ನ ತಪ್ಪಿನ ಬಗ್ಗೆ ಕಿಂಚಿತ್ತೂ ಯೋಚಿಸಲೇ ಇಲ್ಲ.

ಸಾಮಜಿಕವಾಗಿ ಇಂದಿಗೂ ಜನಪದರ ಬದುಕಿನೊಳಗಿರುವ ಮಡಿವಂತಿಕೆಯನ್ನು ಕತೆಗಾರರು ಪ್ರಶ್ನಿಸಿದ್ದಾರೆ? ಕುಡಿಯುವ ನೀರನ್ನು ಬುಡಕಟ್ಟು ಜನರಿಗೆ ಜಾತಿಯ ಕಾರಣವಾಗಿ ನೀಡದೇ ಇರುವುದು ಮೌಢ್ಯತೆಯ ಮುಖವಾಗಿದೆ. ವಿಷಯ ಎಮ್ಮೆಲ್ಯೆ ಅಪ್ಪಾಜಿಗೆ ಬುಡಕಟ್ಟು ಯುವಕರಿಂದ ತಿಳಿದಾಗ ಇವರನ್ನು ರಾಜಕೀಯ ಅಸ್ತ್ರವಾಗಿ ಬಳಸಿಕೊಂಡು ಕೆಂಪರಸಯ್ಯನವರ ಬಾವಿ ನೀರನ್ನು ರಾತ್ರಿ ಹೊತ್ತು ಬಳಸಿ ಎಂದು ಉರಿವ ಬೆಂಕಿಗೆ ತುಪ್ಪ ಸುರಿಯುತ್ತಾನೆ. ಕಾತೆಗಾರರು ರಾಜಕೀಯದ ಇನ್ನೊಂದು ಮುಖದಲ್ಲಿ ಬಡವ ಶ್ರೀಮಂತ, ಮೇಲು ಕೀಳು ಎಲ್ಲವನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸುತ್ತಾರೆಂಬುದನ್ನು ತಿಳಿಸಿದ್ದಾರೆ. ಅಪ್ಪಾಜಿಯ

ಸಮಯದ ಕುತಂತ್ರದಿಂದ ಸಾಮಾಜಿಕ ಶಾಂತಿ ಹಾಳಾಗಿ ಇಡೀ ಗ್ರಾಮವೇ ಗಂಡು ದಿಕ್ಕಿಲ್ಲದೆ ಮುಂಡೆಯಂತಾಗುತ್ತದೆ.

ಆದರೆ ಕತೆಗಾರರು ಕತೆಯ ಕೊನೆಯಲ್ಲಿ ಕೆಂಪರಸಯ್ಯನ ಮಗಳು ಚೆಲುವಮ್ಮನ ಹೆರಿಗೆಯನ್ನು ಬುಡಕಟ್ಟು ಹೆಂಗಸು ಸಿರಿಯವ್ವ ಸೂಸೂತ್ರವಾಗುವಂತೆ ನೋಡಿಕೊಳ್ಳುತ್ತಾಳೆ. ಪರಸ್ಪರ ಮಾನವೀಯತೆಯ ಹಂಚಿಕೆಯಿಂದಾಗಿ ಶಾಂತಿ ನೆಲೆಸುವ ಪ್ರಯತ್ನ ಮಾಡುತ್ತಾಳೆ. "ಅಳುತ್ತಿದ್ದ ಕೂಸು ತಾಯ ಎದೆಸೇರಿ ಸಾವಧಾನದಿಂದ ತನ್ನ ಅಳುವನ್ನು ನಿಲ್ಲಿಸಿದಂತೆ, ದೇವಸಂದ್ರ ಗ್ರಾಮದ ಉದ್ವಿಗ್ನತೆಯೂ ಒಂದು ತಹಬದಿಗೆ ಬರುವಂತೆ ತೋರುತ್ತಿತ್ತು"[೨೬] ಬಡವರ ಬದುಕನ್ನು ದುಷ್ಟ ರಾಜಕಾರಣ ಬಲಿತೆಗೆದುಕೊಂಡಿದ್ದರೂ ಸಿರಿಯವ್ವ ಯಾವುದನ್ನೂ ಲೆಕ್ಕಿಸದೆ ತಾಯಿ ಮಗುವನ್ನು ಉಳಿಸುವ ಮಾನವೀಯತೆ ತೋರುತ್ತಾಳೆ. ರಾಜಕಾರಣ ಕಾಲಿಟ್ಟು ಗ್ರಾಮದ ಕೋಮುಗಳ ನಡುವೆ ಅಶಾಂತಿ ಉಂಟು ಮಾಡುವುದು ವರ್ತಮಾನದಲ್ಲೂ ನಿಲ್ಲದು. ಇದರಿಂದಾಗಿ ಹಿಂಸೆಯ ಪ್ರೌವೃತ್ತಿಯು ಬೆಳೆಯುತ್ತದೆ. ಹಾಗಾಗಿ ಕತೆಗಾರರು ಇಂತಹ ಭ್ರಷ್ಟ ರಾಜಕಾರಣವನ್ನು ಮತ್ತು ಅದರ ವಿವಿಧ ಮುಖಗಳನ್ನು ತೋರಿಸುವ ಪ್ರಯತ್ನ ಮಾಡಿದ್ದಾರೆ.

**ಸಿಸ್ಟಮ್ ಫ್ಯೆಲ್ಯೂರ್ :-**

ವರ್ತಮಾನದಲ್ಲಿರುವ ಶ್ರೀಮಂತ ಕುಟುಂಬಗಳು ಆಧುನೀಕರಣ, ಪಾಶ್ಚಾತ್ಯೀಕರಣಗೊಂಡು ಎದುರಿಸುತ್ತಿರುವ ಸಮಸ್ಯೆಗಳನ್ನು ಈ ಕತೆ ವ್ಯಕ್ತಪಡಿಸುತ್ತದೆ. ಬಡತನದ ಸೊಂಕಿಲ್ಲದೆ, ಜವಾಬ್ದಾರಿಗಳ ಅರಿವಿಲ್ಲದಿರುವ ಶ್ರೀಮಂತ ಕುಟುಂಬಗಳು ಮೋಜು ಮಸ್ತಿಗಳಿಗೆ ಕಟ್ಟು ಬಿದ್ದು ಸಮಾಜದ ದುರ್ಗತಿಗೆ ಕಾರಣವಾಗುತ್ತಿವೆ. ಈ ಕತೆಯಲ್ಲಿ ರತ್ನವರ್ಮ ತುಂಗರು ಹೋಟೆಲ್‌ನಲ್ಲಿ ದೋಸೆ ಹಾಕುವ ಚಾಕರಿ ಮಾಡುತ್ತಿದ್ದರು. ಆದರೆ ವಿವಾಹವಾದ ಮೇಲೆ ಅವರ ಶ್ರಮದ ಫಲವೋ, ಹೆಂಡತಿಯ ಕಾಲ್ಗುಣವೋ ಶ್ರೀಮಂತರಾದರು. ಶ್ರೀಮಂತಿಕೆಯ ಜೊತೆಗೆ ಪಾಪದ ಕೆಲಸಗಳು ಹೆಚ್ಚಾಗಿ ಅವರನ್ನು ಕಾಡತೊಡಗಿದ್ದು ವಾಸ್ತವ ಸಂಗತಿ. 'ಹಾಲು ಕುಡಿದ ಮಕ್ಕಳೇ ಬದುಕುವುದು ಕಷ್ಟ ಇನ್ನು ವಿಷ ಕುಡಿದ ಮಕ್ಕಳು ಹೇಗೆ ಬದುಕಲು ಸಾಧ್ಯ'. ಕತೆಗಾರರು ನಗರೀಕರಣವು ಮನುಷ್ಯನನ್ನು ಅರೆ ಬರೆ ಸುಖಿಯಾಗಿಸಿ ಪೂರ್ತಿ ಕೆಂಡದಲ್ಲಿ ಬೇಯಿಸುವುದನ್ನು ವ್ಯಂಗಮಾಡುತ್ತಾರೆ.

ರತ್ನವರ್ಮ ತುಂಗರು ತಮ್ಮ ಒಬ್ಬನೇ ಮಗನನ್ನು ಕಾಸು ಸುರಿದು ಪ್ರತಿಷ್ಟಿತ ವಿವೇಕಾನಂದ ವಿದ್ಯಾಲಯದಲ್ಲಿ ಓದಿಸುತ್ತಾರೆ. ಆದರೆ ಹಣದ ಸೊಕ್ಕು ಹಾಗು ದುಶ್ಚಟಗಳಿಗೆ ಬಲಿಯಾಗಿ ಜಗಳ ಮಾಡಿಕೊಂಡು ಹೊಡೆದಾಡುವುದು ಮಧುಕರ ತುಂಗನ ವ್ಯಕ್ತಿತ್ವದ ಬಲಹೀನ ಸ್ಥಿತಿ ತೋರಿಸುತ್ತದೆ. ಯುವ ಪೀಳಿಗೆಯೇ ಈ ದೇಶದ ಆಸ್ತಿ. ಅಂತಹ ಯುವ ಪೀಳಿಗೆಯು ಇಂದು ಸಿಗುವ ತಾತ್ಕಾಲಿಕ ಸುಖಗಳ ಹಿಂದೆ ಬಿದ್ದು ಜವಾಬ್ದಾರಿಯ ಹೊರೆ ಹೊರಲಾರದ್ದನ್ನು ಕತೆಗಾರರು ಪ್ರಕಟಪಡಿಸಿದ್ದಾರೆ. ನೈತಿಕ ಪ್ರಜ್ಞೆ ಯಿಲ್ಲದ ಯುವ ಜನತೆ ದೇವರ ಕ್ಷೇತ್ರಗಳನ್ನು ಪ್ರವಾಸಿ ತಾಣಗಳಾಗಿ

ಮಾರ್ಪಡಿಸಿಕೊಂಡು, ಕುಡಿತ, ಜೂಜು, ಪ್ರೀತಿಯ ಅನುಭವಕ್ಕಾಗಿ ಬಳಸುತ್ತಿರುವುದು ಜನಪದ ಸಂಸ್ಕೃತಿಯ ನಾಶಕ್ಕೆ ಕಾರಣವಾಗುತ್ತಿದೆ. ಆಡಂಬರದ ಬದುಕು ವ್ಯವಸಾಯವಿಲ್ಲದೆ ಬೆಳೆವ ಹುಲ್ಲಿನಂತೆ. ಬೇಗೆ ಆವರಿಸಿಕೊಂಡು ಬಿಡುತ್ತದೆ. ವ್ಯವಸ್ಥೆಯ ಒಳಗೆ ಜೀವಿಸುವ ಎಲ್ಲರೂ ವ್ಯವಸ್ಥೆ ಮೀರುವ ಪ್ರಯತ್ನದಲ್ಲೆ ಇರುವುದು ವರ್ತಮಾನದ ಬದುಕಿನ ಸತ್ಯಸಂಗತಿ.

'ಸಿಸ್ಟಮ್ ಫೈಲ್ಯೂರ್' ಕತೆ ಸಮಾಜ ನಿಷ್ಕ್ರಿಯವಾಗಿದೆ ಎಂದು ಹೇಳುತ್ತದೆ. ಕೆಟ್ಟು ನಿಂತಿರುವ ಸಮಾಜ ಉತ್ತಮವಾದರೆ ಮಾತ್ರ ಏನಾದರೂ ಹೇಳಲು ಸಾಧ್ಯ. "ಇದು ಮಾದಪ್ಪನ ನೆಲೆ, ನೇಮನಿಷ್ಟೆ ಇಲ್ಲ ಅಂದ್ರೆ ಕಷ್ಟ. ಇದೆಲ್ಲಾ ತಲತಲಾಂತ್ರದಿಂದ ಬಂದದ್ದು ಕಣಪ್ಪ"[೨೭] ಎಂದು ಕಂಸಾಳೆ ಮುದುಕ ಹೇಳುವ ಮಾತು ನಮ್ಮ ಸಂಸ್ಕೃತಿಯನ್ನು ಉಳಿಸುವುದೇ ಆಗಿದೆ. ಹೀಗೆ ಬೆಟ್ಟದ ಮೇಲೆ ಕುಡಿದು ವಾಪಾಸು ಹೊರಟ ಮಧುಕರ ತುಂಗನ ಕಾರು ಅಪಘಾತಕ್ಕೀಡಾಗಿ ಆಸ್ಪತ್ರೆ ಸೇರುತ್ತಾನೆ. ಆದರೆ ಮಗನನ್ನು ನೋಡಲು ಬಂದ ರತ್ನವರ್ಮ ತುಂಗ ಮತ್ತು ಹೆಂಡತಿ ಮಂಗಳ ಅವರಿಗೆ ಆಸ್ಪತ್ರೆಯ ಕಂಪ್ಯೂಟರ್ ಕೆಟ್ಟುಹೋಗಿ ಯಾವ ವಾರ್ಡು ಎಂದು ತಿಳಿಯದೆ ಕಂಗಾಲಾಗುತ್ತಾರೆ. ಕತೆ ಇಲ್ಲಿಗೆ ಮುಕ್ತಾಯವಾದರೂ ಸಿಸ್ಟಮ್ ಸರಿಪಡಿಸಲು ನುರಿತ ತರಬೇತುದಾರನ ಅವಶ್ಯಕತೆ ಇದೆ ಎಂದು ಹೇಳುವ ವಾರ್ಡ್ ಲೇಡಿ, ಇಡೀ ಸಮಾಜವೇ ಕೆಟ್ಟು ನಿಂತರೆ ಎಲ್ಲರೂ ಉತ್ತಮರಾದಾಗ ಮಾತ್ರ ಸರಿಪಡಿಸಲು ಸಾಧ್ಯ ಎಂದು ಹೇಳುವಂತೆ ಕಾಣುತ್ತದೆ.

ಒಟ್ಟಾರೆ ಈ ಕತೆಯು ಪಾಶ್ಚಾತ್ಯೀಕರಣಗೊಂಡಿರುವ ವರ್ಗವನ್ನು ಇವರಿಂದ ಸಮಾಜದ ಮೇಲಾಗುತ್ತಿರುವ ದುಷ್ಪರಿಣಾಮವನ್ನು ಸ್ಪಷ್ಟವಾಗಿ ಹೇಳುತ್ತದೆ.

**ಜುಯೆಲ್ ಬಾಕ್ಸ್ :-**

ಈ ಕತೆಯು ವರ್ತಮಾನ ಸಮಾಜದಲ್ಲಿ ನಡೆಯುತ್ತಿರುವ ಮೋಸ, ದೌರ್ಜನ್ಯ ಹಾಗೂ ಪರಭಾಷಿಕರ ಅತಿಕ್ರಮಣದಿಂದಾಗಿ ಆಗುತ್ತಿರುವ ಅನ್ಯಾಯವನ್ನು ತಿಳಿಸುತ್ತದೆ. ಶ್ರೀರಾಮ ಕೃಷ್ಣ ವಿದ್ಯಾಮಂದಿರದ ಪ್ರಾಂಶುಪಾಲರಾದ ಪ್ರಸಾದ್ ತಮ್ಮ ವಿದ್ಯಾಮಂದಿರದ ಮುಂದಿನ ಜಾಗದಲ್ಲಿ ಕಟ್ಟಡ ನಿರ್ಮಾಣಮಾಡುವ ಯೋಜನೆಯಲ್ಲಿದ್ದರು. ಮಳಿಗೆಗಳಿಂದ ಬಾಡಿಗೆ ಬಂದರೆ ಒಂದಷ್ಟು ಉಪಯುಕ್ತವಾಗುತ್ತದೆಂಬ ಆಸೆಯಿತ್ತು. ಆದರೆ ಪಕ್ಕದಲ್ಲಿದ್ದ ಜುಯೆಲ್ ಬಾಕ್ಸ್ ಮಳಿಗೆ ವಿದ್ಯಾಮಂದಿರಕ್ಕೆ ಸೇರಿದ ಸ್ವತ್ತು ಎಂದು ತಿಳಿದು, ಅದರ ಮಾಲೀಕರೆನಿಸಿಕೊಂಡ ತಂಗಮುತ್ತು ಅವರನ್ನು ಭೇಟಿ ಮಾಡಿದರು. ಶೈಕ್ಷಣಿಕ ಪ್ರಗತಿಯ ಚಿಂತಕರಾಗಿದ್ದ ಪ್ರಸಾದ್ ಅವರನ್ನು ಹಣದ ಪ್ರಭಾವ ಸೆಳೆಯಲು ಯತ್ನಿಸಿರಾದರೂ ವಿಚಲಿತರಾಗದಂತೆ ತಡೆಯಿತು.

ಹಿಂದೆ ಯಾರ ಕಾಲದಲ್ಲೋ ಪ್ರಸಾದ್ ಅವರ ಚಿಂತನೆಯಂತೆ ಕಟ್ಟಡ ಕಾಮಗಾರಿಯಾಗಿ ಅದು ಬೇರೆಯವರ ಪಾಲಾಗಿರುವ ಘಟನೆ ತಿಳಿದು ಬೇಸರವೆನಿಸುತ್ತದೆ. ಈಗ ಆಡಳಿತ ಮಂಡಳಿ ಮುಂದೆ ಏನು ಹೇಳಲಿ ಎಂದು ಯೋಚಿಸುತ್ತಲೇ ಕತೆ ಮುಕ್ತಾಯವಾಗುತ್ತದೆ. ಆದರೆ ಇಲ್ಲಿ ಹನೂರರು ಶೈಕ್ಷಣಿಕ

ಕ್ಷೇತ್ರದಲ್ಲಿರುವ ಬೇಜವಾಬ್ದಾರಿ ಹಾಗೂ ಸಾಮಾಜಿಕವಾಗಿ ಇರುವ ವ್ಯಕ್ತಿಗತವಾದ ನಿರ್ಣಯಗಳು ಯಾರೋ ಬಂದು ಆಸ್ತಿ ಲಪಟಾಯಿಸುವ ಸಂಚು ಹೆಚ್ಚುತ್ತಿದೆ. ಸಂಸ್ಕೃತಿ, ಶಿಕ್ಷಣದ ಮಹತ್ವ ಕಡಿಮೆಯಾಗಿ ಇವುಗಳ ಜಾಗದಲ್ಲಿ ರೆಸ್ಟೋರೆಂಟ್, ಜುಯಲ್ ಶಾಪ್‌ಗಳನ್ನು ನಿರ್ಮಿಸುವ ಬಯಕೆ ವ್ಯಕ್ತಪಡಿಸಿದ ತಂಗಮುತ್ತು ಹೊರಗಿನವನೇ ಹೊರತು ನಮ್ಮವನಲ್ಲ ಎನಿಸುತ್ತದೆ. ಬೆಂಗಳೂರು ಈಗ ಮೂಲ ಸಂಸ್ಕೃತಿಯನ್ನು ಕಳೆದುಕೊಂಡು ಪ್ರತಿ ಸಂಸ್ಕೃತಿಯ ತಾಣವಾಗುತ್ತಿರುವುದಕ್ಕೆ ಈ ಕೆತೆಯು ಸಾಕ್ಷಿಯಾಗಿದೆ.

ಕೂಲಿಗೆಂದು ಬಂದ ತಂಗಮುತ್ತು, ವೈರಮುತ್ತು ಬೆಂಗಳೂರಿನಲ್ಲಿ ನೆಲಸಿ ಇಂದು ಶ್ರೀಮಂತರಾಗಿದ್ದಾರೆ. ರಾಮಕೃಷ್ಣ ವಿದ್ಯಾಮಂದಿರಲ್ಲಿ ನಿರ್ಮಾಣವಾಗುತ್ತಿದ್ದ ಕಟ್ಟಡ ಕಾಯುವವರಾಗಿ ನೇಮಕರಾದ ಇವರು ಕಟ್ಟಡವನ್ನೆ ಸಂತವಾಗಿಸಿಕೊಂಡದ್ದು ಅನ್ಯಮಾರ್ಗದಲ್ಲಿ, ಹೀಗೆ ಎಷ್ಟೋ ಜನರು ಖಾಸಗಿ ಜಮೀನು, ಸರ್ಕಾರಿ ಜಮೀನುಗಳನ್ನು ಹಣದಾಸೆಗೆ ಮಾರಿಕೊಳ್ಳುತ್ತಿರುವ ಕನ್ನಡಿಗರ ಪರಿಸ್ಥಿತಿ ಮುಂದಿನ ದಿನಗಳಲ್ಲಿ ಕಷ್ಟವಿದೆ ಎಂದು ಕತೆಗಾರರು ಹೇಳುವ ಪ್ರಯತ್ನ ಮಾಡಿದ್ದಾರೆ.

ವಿದ್ಯಾಮಂದಿರದ ಆಡಳಿತ ಮಂಡಳಿ, ಪೋಲಿಸ್ ತನಿಖೆ, ಕೋರ್ಟ್‌ನ ಸತ್ಯ ಎಲ್ಲವೂ ಇಲ್ಲಿ ಸತ್ತು ಹೋಗಿರುವುದರಿಂದಲೇ ಎನೋ "ಅಣ್ಣತಮ್ಮಂದಿರಾದ ತಂಗಮುತ್ತು, ವೈರಮುತ್ತು ಈಗ ಇರುವ ಜಾಗದಲ್ಲೇ ವಾಸಮಾಡತಕ್ಕದೆಂಬ ಸೌಹಾರ್ದ ತೀರ್ಮಾನಕ್ಕೆ ಬಂದಿರುತ್ತಾರೆ. ಮುಂದೇನಾದರೂ ಸಂಧರ್ಭವೊದಗಿದರೆ ಇವರು ಎಂಭತ್ತು ನೂರರ ನಿವೇಶನವನ್ನು ಸಮ ಹಂಚಿಕೊಂಡು ಮನೆಕಟ್ಟಿ ವಾಸಮಾಡಲು ಅವಕಾಶವಿರುತ್ತದೆ."[೨೮] ಈ ರೀತಿಯ ಕೋರ್ಟಿನ ಹೇಳಿಕೆ ಅವರದಲ್ಲದ ಜಾಗವನ್ನು ಅವರದೇ ಎಂದು ಹೇಳುವ ಮೂಲಕ ಸಮಾಜಕ್ಕೆ ಮೋಸವೆಸಗಿತ್ತು. ಅಧಿಕಾರದ ದುರ್ಬಳಕೆಗೆ ಇಳಿವ ಮಂತ್ರಿಗಳು ದೇಶವನ್ನೆ ಮಾರುವ ಸ್ಥಿತಿಯಲ್ಲಿರುವಾಗ ಇಂತಹ ಪ್ರಕರಣಗಳ ಕಡೆ ಗಮನ ಹರಿಸುವ ಹೊಣೆ ಯಾರದು. ಒಟ್ಟಿನಲ್ಲಿ ಸದ್ಯದ ರಾಜಕೀಯ ದೌರ್ಬಲ್ಯ, ಆರಕ್ಷಕರ ದೌರ್ಬಲ್ಯ, ಕನ್ನಡಿಗರ ದೌರ್ಬಲ್ಯವನ್ನು ಈ ಕತೆ ಕನ್ನಡಿ ಹಿಡಿದು ತೋರಿಸುತ್ತದೆ.

<u>ನಿರ್ಧಾರ :</u>-

ಈ ಕತೆಯು ಪ್ರಜ್ಞಾವಂತ, ವಿದ್ಯಾವಂತ ಯುವಕ ತನ್ನ ಜೀವನದ ಮುಂದಿನ ಜವಬ್ದಾರಿಗಳ ಬಗ್ಗೆ ತೆಗೆದುಕೊಳ್ಳುವ ನಿರ್ಧಾರವೇ ಆಗಿದೆ. ಕತೆಯಲ್ಲಿ ಯಾವ ಪಾತ್ರದ ಹೆಸರನ್ನೂ ಬಳಸದೆ ಕೇವಲ ನಿರೂಪಣಾ ಶೈಲಿಯಲ್ಲಿ ಒಬ್ಬ ಪಧವೀಧರ ತೆಗೆದುಕೊಳ್ಳುವ ನಿರ್ಧಾರವನ್ನು ಒಪ್ಪಬಹುದು. ಕೃಷ್ಣಮೂರ್ತಿ ಹನೂರ ಕಥಾ ಸಾಹಿತ್ಯಕ್ಕೆ ಕಾಲಿಟ್ಟ ಮೊದಲ ಕಥೆಯೇ 'ನಿರ್ಧಾರ' ಅವರು ಪದವಿ ಓದುವಾಗ ಬರೆದದ್ದು, ದೇಶದೊಳಗಿದ್ದ ನಿರುದ್ಯೋಗ ಸಮಸ್ಯೆ ಮತ್ತು ಹಸಿರು ಕ್ರಾಂತಿ ಆಗಬೇಕಾದ ಅನಿವಾರ್ಯತೆ ಇವೆರೆಡರೆ ನಡುವೆ ಸಿಕ್ಕಿಹಾಕಿಕೊಂಡ ಯುವಕನ ಭಾವನೆಗಳು ಇಲ್ಲಿ ವ್ಯಕ್ತವಾಗಿವೆ.

ತನ್ನ ಸ್ನೇಹಿತ ಹೇಳಿದ "ಮದುವೇ ಮಾಡುವವರೆಗೂ ಇರು, ಮದುವೆ ಮಾಡಿಕೋ, ಮೆಲ್ಲಗೆ ಇತ್ತ ಬಂದುಬಿಡು, ಮನೆ ವಿಷಯ ಅದು, ಇದೂ.. ಎಲ್ಲ ನನಗೆ ಬಿಟ್ಟುಬಿಡು"[೨೯] ಎಂಬ ಮಾತು ಇಷ್ಟವಾದರೂ ತನ್ನನ್ನು ಸಾಕಿದ ತಂದೆಯ ಶ್ರಮ, ತಾಯಿಯ ಪ್ರೀತಿ ಹಾಗೆ ಕಣ್ಣ ಮುಂದೆ ನೆನೆದಾಗ ಮನಸ್ಸು ದುರ್ಬಲವಾಗುತ್ತದೆ. ಇಲ್ಲೆ ಊರಲ್ಲೇ ಉಳಿದು ತಲತಲಾಂತರದಿಂದ ಗೌಡಿಕೆ ಪಟ್ಟ ಹೊತ್ತು, ಒಬ್ಬನೇ ಮನಗಾದ್ದರಿಂದ ಹಟ್ಟಿ, ಈ ಹೊಲ, ಗದ್ದೆ ಎಲ್ಲವನ್ನೂ ನೋಡಿಕೊಂಡು ಹೋಗುವ ಆಸೆ, ಉರ ಒಳಗಿದ್ದ ಜಾತಿಗಳ ಸೌಹಾರ್ದತೆ ಕಡಿಮೆಯಾದ್ದರಿಂದ ಆ ಭಂಡರಿಗೆಲ್ಲ ನ್ಯಾಯ ಹೇಳುವವರಾರು ಎಂದು ಯೋಚಿಸಿ ಅವಳನ್ನು ಮದುವೆಯಾಗಿ ಹೊರಡುವುದೇ ವಾಸಿ ಎಂದು ಮತ್ತೊಂದು ಆಸೆ.

ಹಳ್ಳಿಗಳಿಂದ ಪಟ್ಟಣಕ್ಕೆ ಹೋಗಿ ವಿದ್ಯಾವಂತರಾಗಿ ಮತ್ತೆ ಹಳ್ಳಿಯ ಕಡೆ, ಕೃಷಿಯ ಕಡೆ ತಿರುಗಿಯೂ ನೋಡದ ವಿಚಾರವಂತರನ್ನು ಕತೆಗಾರರು ಎಚ್ಚರಿಸುತ್ತಾರೆ. ಪಟ್ಟಣದ ಸುಖಕ್ಕೆ ಸೋತು ಅಲ್ಲೆ ಎಲ್ಲರೂ ಉಳಿದರೆ ಆಹಾರದ ಸಮಸ್ಯೆ ತಲೆದೋರುತ್ತದೆ. "ಇಂದು ನಮ್ಮ ದೇಶದಲ್ಲಿ ಒಂದು ಕಡೆ ವಿದ್ಯಾವಂತರು ನಿರುದ್ಯೋಗಿಗಳಾಗುತ್ತಿದ್ದಾರೆ. ಇನ್ನೊಂದು ಕಡೆಯಲ್ಲಿ ನಮ್ಮೆಲ್ಲರನ್ನು ಆಹಾರ ಸಮಸ್ಯೆ ಕಾಡುತ್ತಿದೆ"[೩೦] ಎಂಬ ಭಾಷಣದ ಮಾತುಗಳು ಸಾಕಾರವಾಗಬೇಕಾದರೆ ಗಾಂಧೀಜಿಯ ಹಳ್ಳಿಗಳ ಉಳಿವಿನ ಕನಸು ನನಸಾಗಬೇಕು. ಜನಪದ ಸಂಸ್ಕೃತಿಯು ದೇಶದ ಕೃಷಿ, ಹಳ್ಳಿಯ ಮುಗ್ಧ ಜನಗಳಿಂದಲೇ ಹುಟ್ಟಿ ಬೆಳೆದದ್ದು. ಆದರೆ ನಗರೀಕರಣದ ಹೊಡೆತ ಎಲ್ಲರನ್ನು ಇಂದಿಗೂ ಕೈ ಬೀಸಿ ಕರೆಯುತ್ತಿರುವುದು ಗ್ರಾಮೀಣ ಬದುಕನ್ನು ನಾಶ ಮಾಡುವುದರ ಹೊಣೆಹೊತ್ತಂತೆ ಕಾಣುತ್ತದೆ. ಇಲ್ಲಿಯ ಕಥಾನಾಯಕ ತನ್ನ ಹಳ್ಳಿಯ ಸಮಸ್ಯೆಗಳ ಬಗ್ಗೆ, ದೇಶದ ಆಹಾರ ಸಮಸ್ಯೆಯ ಬಗ್ಗೆ, ವೈಯುಕ್ತಿಕ ಬದುಕಿನ ಬಗ್ಗೆ, ತಂದೆ ತಾಯಿಯ ಮುಂದಿನ ಬದುಕಿನ ಬಗ್ಗೆ ಚಿಂತಿಸುವುದು ಸ್ವಾಗತಾರ್ಹ. ಮುದುಡಿ ಹೋಗುತ್ತಿರುವ ಈ ಸಮಾಜದ ಬಗ್ಗೆ ವಿದ್ಯಾವಂತ ಯುವಕರು ಯೋಚಿಸಬೇಕಾದ ಅಗತ್ಯವಿದೆ. ಕೃಷಿ ಏನು ಕೀಳರಿಮೆಯ ಕೆಲಸವಲ್ಲ. ಉದ್ಯೋಗ ದೊಡ್ಡ ಕೆಲಸವೂ ಅಲ್ಲ ಹಾಗಾಗಿ ಗ್ರಾಮೀಣ ಬದುಕಿನ ಕಡೆಗೆ, ಕೃಷಿಯ ಕಡೆಗೆ ತಿರುಗುವ ಇಲ್ಲಿನ ಕಥಾನಾಯಕ ಹೊಸ ಭರವಸೆಯನ್ನು ಮೂಡಿಸುತ್ತಾನೆ. ಒಟ್ಟಿನಲ್ಲಿ ಯುವಕರು ದೇಶದ ಬೆನ್ನೆಲುಬು ಅವರ ಮನಸ್ಥಿತಿಯು ಉತ್ತಮವಾದರೆ ದೇಶ ಉತ್ತಮ. ಹಾಗಾಗಿ ಈ ಕತೆ ಅಂತಹ ಉತ್ತಮ ಬದಲಾವಣೆಗೆ ಪ್ರೋತ್ಸಾಹ ನೀಡುತ್ತದೆ.

'ಕಳೆದ ಮಂಗಳವಾರ ಮುಸ್ಸಂಜೆ..', "ಪರಂಪರಾಗತ ಬದುಕಿನ ಮೌಲ್ಯ ಹಾಗೂ ಪ್ರಸಕ್ತ ಬದುಕಿನ ಮಾರ್ಪಾಟುಗಳು ಇವೆರೆಡನ್ನೂ ಸಮಸಮವಾಗಿ ಎಂಬಂತೆ ಅಭಿವ್ಯಕ್ತಿಸುವ ಸಂಕಲನದ ಕಥೆಗಳ ಭಾಷೆಯೇ ಆಕರ್ಷಕವಾದುದು"[೩೧] ಕತೆಗಳಲ್ಲಿ ಭವಿಷ್ಯದಲ್ಲಿ ಆಗಬೇಕಾದ ಬದಲಾವಣೆಗೆ ಉತ್ತರಗಳಿವೆ. ಹಾಗಾಗಿ ಮೇಲಿನ ಹೇಳಿಕೆಯನ್ನು ಒಪ್ಪಬಹುದಾಗಿದೆ. ಹನೂರರ ಈ ಕತೆಗಳಲ್ಲಿ ಬಹು ಭಾಷೆಯ ಬಳಕೆಯಿದೆ. ಹಲವು ಭಾಷೆಗಳ ಮುಂದೆ ಕನ್ನಡ ಭಾಷೆಯ ಸೋಲು ಕಂಡುಬರುತ್ತದೆ.

ಪ್ರತಿಯೊಂದು ಕೂಡ ಬುಡಕಟ್ಟು ಜೀವನ, ಜನಪದ ಸಂಸ್ಕೃತಿಯ ವಿರುದ್ಧ ಯುದ್ಧಕ್ಕೆ ನಿಂತಿರುವ ಆಧುನೀಕರಣದ ವಿಷಯವನ್ನೇ ಮುಖಾಮುಖಿಯಾಗಿಸುತ್ತವೆ. ಇವುಗಳ ಪರಿವೇ ಇಲ್ಲದ ರಾಜಕೀಯ ವ್ಯವಸ್ಥೆಯನ್ನು ವಿಡಂಬಿಸಿದ್ದಾರೆ. ಕಥೆಗಳಲ್ಲಿ ಬರುವ ಪೂವಮ್ಮ, ಸಿದ್ದಜ್ಜ, ಸಾಬಣ್ಣ ಪಾತ್ರಗಳು ಜೀವನ ಪರ ಮೌಲ್ಯಗಳನ್ನು ಪ್ರತಿ ಓದುಗರಿಗೂ ಹಂಚುವ ಕೆಲಸ ಮಾಡುತ್ತಿವೆ. 'ಸಾಮಧಾನವ ಮೀಟಿದ ಆಳು' ಕತೆಯು ಪರಂಪರಾಗತವಗಿ ಬಂದ ಯಜಮಾನ ಸಂಸ್ಕೃತಿಯನ್ನು, ಜೀತ ಪದ್ಧತಿಯನ್ನು ಮೆಟ್ಟಿನಿಂತು ಪ್ರತಿಭಟಿಸುವ ನ್ಯಾಯಕ್ಕಾಗಿ ಹೋರಾಡುವ, ಸ್ವತಂತ್ರರಾಗಿ ಬದುಕಬೇಕೆಂಬ ಹಂಬಲ ವ್ಯಕ್ತವಾಗಿದೆ. ಹಾಗಾಗಿ ಈ ಕಥಾ ಸಂಕಲನ ಸಮಾಜದ ಏಳ್ಗೆಯನ್ನು ಗ್ರಾಮೀಣ ಬದುಕನ್ನು, ಜನಪದ ಸಂಸ್ಕೃತಿಯನ್ನು ಪೋಷಿಸುವ ಪ್ರಯತ್ನ ಮಾಡಿದೆ ಎಂದು ಹೇಳಬಹುದು.

ಒಟ್ಟಾರೆ ಮೂರು ಕಥಾ ಸಂಕಲನಗಳಲ್ಲಿ ಬರುವ ಕಥೆಗಳು ಸಮಾಜದ ಅಂಕುಡೊಂಕುಗಳನ್ನು ತಿದ್ದುವ ಕೆಲಸ ಮಾಡಿವೆ. ಬದುಕಿನ ಸಾರ್ಥಕತೆಯನ್ನು ತಮ್ಮ ಕತೆಗಳಲ್ಲಿ ಅತ್ಯಂತ ಅರ್ಥಪೂರ್ಣವಾಗಿ ಚಿತ್ರಿಸಿದ್ದಾರೆ. ಭಾಷೆಯನ್ನು ಅದರೆಲ್ಲ ಸಾಧ್ಯತೆಗಳಿಂದ ದುಡಿಸಿಕೊಂಡಿರುವ ಹನೂರರು, ನವೀನ ತಂತ್ರವನ್ನು ಬಳಸಿಕೊಂಡು ಕತೆಗಳನ್ನು ತುಂಬ ಕಲಾತ್ಮಕವಾಗಿ ರಚಿಸಿದ್ದಾರೆ. ಇಂಥ ಎಲ್ಲ ವಿಶೇಷ ಗುಣಗಳಿಂದಾಗಿ ಹನೂರು ಅವರ ಕಥೆಗಳು ಕನ್ನಡ ಸಾಹಿತ್ಯ ಲೋಕದಲ್ಲಿ ವಿಶಿಷ್ಟ ಸ್ಥಾನ ಪಡೆದ ಗಟ್ಟಿ ಕತೆಗಳಾಗಿ ನಿಲ್ಲುತ್ತವೆ.

**ಅಡಿಟಿಪ್ಪಣಿ :-**

೧ : ಕೃಷ್ಣಮೂರ್ತಿ ಹನೂರು : ಕೇರಿಗೆ ಬಂದ ಹೋರಿ : ಪುಟ – ೪
೨ : ಅದೇ : ಪುಟ : ೧೮, ೧೯
೩ : ಅದೇ : ಪುಟ : ೨೨
೪ : ಅದೇ : ಪುಟ : ೩೬
೫ : ಅದೇ : ಪುಟ : ೫೩
೬ : ಅದೇ : ಪುಟ : ೫೧
೭ : ಅದೇ : ಪುಟ : ೮೩
೮ : ಅದೇ : ಪುಟ : ೯೧
೯ : ಅದೇ : ಪುಟ : ೯೪
೧೦ : ಅದೇ : ಪುಟ : ೧೦೫
೧೧ : ಅದೇ : ಪುಟ : ೧೦೭
೧೨ : ಅದೇ : ಪುಟ : ೧೧೭
೧೩ : ಅದೇ : ಪುಟ : ೧೨೧
೧೪ : ಕೃಷ್ಣಮೂರ್ತಿ ಹನೂರು : ಕತ್ತಲಲ್ಲಿ ಕಂಡ ಮುಖ : ಪುಟ : ೧೭
೧೫ : ಅದೇ : ಪುಟ : ೪೦
೧೬ : ಅದೇ : ಪುಟ : ೯೩
೧೭ : ಅದೇ : ಪುಟ : ೧೩೬
೧೮ : ಕೃಷ್ಣಮೂರ್ತಿ ಹನೂರು : ಕಳೆದ ಮಂಗಳವಾರ ಮುಸ್ಸಂಜೆ : ಪುಟ : ೭
೧೯ : ಅದೇ : ಪುಟ : ೪೩
೨೦ : ಅದೇ : ಪುಟ : ೫೧, ೫೨
೨೧ : ಅದೇ : ಪುಟ : ೫೭
೨೨ : ಅದೇ : ಪುಟ : ೭೦
೨೩ : ಅದೇ : ಪುಟ : ೭೧, ೭೨
೨೪ : ಅದೇ : ಪುಟ : ೧೦೧
೨೫ : ಅದೇ : ಪುಟ : ೧೪೬
೨೬ : ಅದೇ : ಪುಟ : ೧೫೧
೨೭ : ಅದೇ : ಪುಟ : ೧೫೯
೨೮ : ಅದೇ : ಪುಟ : ೧೭೪
೨೯ : ಅದೇ : ಪುಟ : ೧೮೯
೩೦ : ಅದೇ : ಪುಟ : ೧೯೪
೩೧ : ಜಿ.ಆರ್. ತಿಪ್ಪೇಸ್ವಾಮಿ : ಪತ್ರಿಕೆ – ಅಗ್ನಿ : ಜೂನ್ ೧೨ : ೨೦೦೮

ಅಧ್ಯಾಯ - ೫

# ಕೃಷ್ಣಮೂರ್ತಿ ಹನೂರು ಅವರ ಕಾದಂಬರಿಗಳು

**ಪೀಠಿಕೆ :-**

"ಆಧುನಿಕತೆ ಕನ್ನಡದಲ್ಲಿ ಕಾವ್ಯಕ್ಕಿಂತಲೂ ಮೊದಲು ಕಾದಂಬರಿಯಲ್ಲಿ ಕಾಣಿಸಿಕೊಂಡಿತೆನ್ನುವುದು ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಮಹತ್ವದ್ದಾಗಿದೆ. ೧೮೭೫ ರಿಂದ ೧೯೩೦ ರ ವರೆಗಿನ ಕಾಲವನ್ನು ಕನ್ನಡ ಕಾದಂಬರಿಯ ಉದಯದ ಕಾಲವೆಂದು ಗುರುತಿಸಲಾಗಿದೆ."[೧] ಹೀಗೆ ಹುಟ್ಟಿಕೊಂಡ ಕಾದಂಬರಿ ಪ್ರಕಾರವು ಕನ್ನಡ ಸಾಹಿತ್ಯದಲ್ಲಿ ಮಾತ್ರವಲ್ಲದೆ ಭಾರತೀಯ ಎಲ್ಲ ಭಾಷೆಗಳ ಮೇಲೂ ತನ್ನ ಪ್ರಭಾವ ಉಂಟಾಯಿತು. ಕೇವಲ 'ನಾವೆಲ್' ಎಂಬ ರೂಪವು ನಕಲಾಗಿ ಪಾಶ್ಚಾತ್ಯರಿಂದ ಬಂದಿತಾದರೂ ವಸ್ತುವಿನ ದೃಷ್ಟಿಯಿಂದ ಸೃಜನಶೀಲವೆನಿಸಿದೆ.

"ಇಂಗ್ಲೀಷ್‌ನ 'ನಾವೆಲ್' ಕನ್ನಡದಲ್ಲಿ 'ಕಾದಂಬರಿ', ಬಾಣಭಟ್ಟನ ಸಂಸ್ಕೃತ 'ಕಾದಂಬರಿ' ಕೃತಿಯಿಂದಾಗಿ ಈ ಶಬ್ಧ ಕನ್ನಡದ ಓದುಗನಿಗೆ ಪರಿಚಿತವೇ ಆಗಿತ್ತು. ಹತ್ತನೇ ಶತಮಾನದಲ್ಲಿ ನಾಗವರ್ಮ ಇದನ್ನು ಕನ್ನಡಕ್ಕೆ ಅನುವಾದಿಸಿದ್ದನು. ಈಚಿನ ಕಾಲದಲ್ಲಿ ತುರುಮುರಿ (ಗಂಗಾಧರ ಮಡಿವಾಳೇಶ್ವರ ತುರಮುರಿ, ೧೮೨೨-೭೭) ಮತ್ತು ಜಿ.ವೈ. ಕೃಷ್ಣಚಾರ್ಯರು ಅನುವಾದಿಸಿದ್ದರು. ೧೮೯೦ ರ ದಶಕದ ಪ್ರಾರಂಭದಲ್ಲಿ ಉತ್ತರ ಕರ್ನಾಟಕದಲ್ಲಿ 'ಕಾದಂಬರಿ' ಎಂಬ ಪದವನ್ನು 'ನಾವೆಲ್'ಗೆ ಸಮನಾಗಿ ಬಳಸಿದಂತೆ ಕಾಣುತ್ತದೆ. ಕನ್ನಡ ಕಾದಂಬರಿಯ ಪ್ರಾರಂಭದ ಇತಿಹಾಸದಲ್ಲಿ ಒಂದು ಮುಖ್ಯ ಪಾತ್ರವನ್ನು ವಹಿಸಿದ ಬಂಗಾಳಿ ಕಾದಂಬರಿಗಳ ಅನುವಾದಗಳನ್ನು ಕೊಟ್ಟ ಬಿ. ವೆಂಕಟಾಚಾರ್ಯರು (೧೮೪೫-೧೯೧೪) 'ನಾವೆಲ್' ಶಬ್ಧವನ್ನೇ ಬಳಸಿದರು. ೧೮೯೧ ರಲ್ಲಿ ಧಾರವಾಡ ವಿಧ್ಯಾವರ್ಧಕ ಸಂಘವು ಅತ್ಯುತ್ತಮ 'ಕಾದಂಬರಿ'ಗೆ ಮೂವತ್ತು ರೂಪಾಯಿಗಳ ಬಹುಮಾನಗಳನ್ನು ಕೊಡುವುದಾಗಿ ಪ್ರಕಟಿಸಿತು. ಹಲವು ಮರಾಠಿ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದ ಗಳಗನಾಥರು (೧೮೬೯-೧೯೪೨) ೧೮೯೦ ರ ದಶಕದಲ್ಲಿ ತಮ್ಮ ಕೃತಿಗಳನ್ನು 'ನಾವೆಲ್' ಗಳೆಂದೇ ಕರೆದರು. ಕ್ರಮೇಣ 'ಕಾದಂಬರಿ' ಶಬ್ಧವು ಕರ್ನಾಟಕದಲ್ಲೆಲ್ಲ ಸ್ವೀಕೃತವಾಗುತ್ತಾ ಬಂದು ಇಂದು ಸ್ಥಿರವಾಗಿ ಬೇರೂರಿದೆ"[೨] ಎಂದು ಕಾದಂಬರಿಯ ಪ್ರಾರಂಭದ ಹಂತವನ್ನು ಎಲ್.ಎಸ್. ಶೇಷಗಿರಿರಾವ್ ಅವರು ಗುರುತಿಸಿದ್ದಾರೆ.

ಕನ್ನಡದಲ್ಲಿ ಪ್ರಾರಂಭದ ಹಂತಗಳಲ್ಲಿ ಸ್ವತಂತ್ರ ಕಾದಂಬರಿಗಳು ಬರದೇ ಅನುವಾದ ಕಾದಂಬರಿಗಳು ಬಂದವು. ಗುಲವಾಡಿ ವೆಂಕಟರಾಯರ 'ಇಂದಿರಾಬಾಯಿ' ಕಾದಂಬರಿಯೇ ಕನ್ನಡದ ಮೊಟ್ಟ ಮೊದಲ ಸ್ವತಂತ್ರ ಸಾಮಾಜಿಕ ಕಾದಂಬರಿ ಎನಿಸಿತು. ಇವರ ನಂತರ ಬಂದ ಗಳಗನಾಥರು, ಬಿ. ವೆಂಕಟಾಚಾರ್ಯರು, ಕೆ.ವಾಸುದೇವಾಚಾರ್ಯರು ಸ್ವತಂತ್ರ ಕಾದಂಬರಿಗಳನ್ನು ಬರೆಯತೊಡಗಿದರು.

ರೋಮ್ಯಾಂಟಿಕ್ ಮತ್ತು ಅಭಿಜಾತ ಸಾಹಿತ್ಯದ ಪ್ರೇರಣೆ ಪಡೆದ ನವೋದಯದ ಲೇಖಕರು ರಾಷ್ಟ್ರಭಕ್ತಿ, ಅಹಿಂಸೆ, ಆದರ್ಶ, ಮಾನವೀಯತೆಯನ್ನು ಮುಖ್ಯ ಉದ್ದೇಶವಾಗಿಟ್ಟುಕೊಂಡು ಕಾದಂಬರಿಗಳನ್ನು ಬರೆಯತೊಡಗಿದರು. ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು', ಕಾರಂತರ 'ಮೂಕಜ್ಜಿಯ ಕನಸುಗಳು' ಮತ್ತು ಮಾಸ್ತಿ ಅವರು ಸಂಪ್ರದಾಯ, ಸಂಸ್ಕೃತಿ ಮತ್ತು ಬದುಕುವ ಹೊಸ ದೃಷ್ಟಿಕೋನಗಳನ್ನು ಸ್ವಂತಿಕೆಯಿಂದಲೇ ಬರೆದರು.

ಕಾರ್ಲ್‌ಮಾರ್ಕ್ಸ್, ಬರ್ಡನ್‌ಷಾ ರಂತಹ ಬರಹಗಾರರಿಂದ ಪ್ರಭಾವಿತರಾಗಿ, ಪ್ರಗತಿಶೀಲರು ಕಾದಂಬರಿಗಳನ್ನು ಬರೆಯತೊಡಗಿದರು. ಅನಕೃ, ನಿರಂಜನ, ಚದುರಂಗ, ತ.ರಾ.ಸು, ವ್ಯಾಸರಾಯ ಬಲ್ಲಾಳ ಮುಂತಾದ ಕಾದಂಬರಿಕಾರರು ಬರವಣಿಗೆಗೆ ಹೊಸ ತಿರುವನ್ನು ಕೊಟ್ಟರು. ಸಾಮಾಜಿಕ ಸಮಸ್ಯೆಗಳನ್ನು ಪ್ರಮುಖವಾಗಿ ಬಾಲ್ಯವಿವಾಹ, ವಿಧವಾ ವಿವಾಹ ಮತ್ತು ದುಡಿಯುವ ವರ್ಗದ ದನಿಯಾಗಿ ಸ್ಪಂದಿಸಿದವರು. ಸಮಾಜ ಸುಧಾರಣೆಗೆ ವ್ಯಕ್ತಿ ಮತ್ತು ಸಮಾಜದ ಸಂಬಂಧಗಳು, ವ್ಯಕ್ತಿ ವ್ಯಕ್ತಿಯ ಸಂಬಂಧಗಳನ್ನು ಕಾದಂಬರಿಗಳಲ್ಲಿ ವಸ್ತುವಾಗಿಸಿದರು. ನಿತ್ಯ ಜೀವನದ ಹಲವು ಏಳು ಬೀಳುಗಳನ್ನು ಸರಳತೆಯಲ್ಲಿ ನಿರೂಪಣೆ ಮಾಡಿದ್ದಾರೆ.

ಯೂಂಗ್, ಟಿ.ಎಸ್. ಎಲಿಯಟ್, ಕಾಮೂ . . ಮುಂತಾದವರ ಅಸಂಗತ ತತ್ವ ಮತ್ತು ಅಸ್ತಿತ್ವವಾದಿ ಚಿಂತನೆಯನ್ನು ಒಪ್ಪಿಕೊಂಡು ನವ್ಯರು ಕಾದಂಬರಿಗಳನ್ನು ಬರೆಯತೊಡಗಿದರು. ಯಶವಂತ ಚಿತ್ತಾಲ, ಶಾಂತಿನಾಥದೇಸಾಯಿ, ಯು.ಆರ್. ಅನಂತಮೂರ್ತಿ, ಪಿ.ಲಂಕೇಶ್, ಚಂದ್ರಶೇಖರ ಕಂಬಾರ, ಪೂರ್ಣಚಂದ್ರ ತೇಜಸ್ವಿ ದೇವನೂರು ಮಹದೇವ ಮೊದಲಾದವರು ಕಾದಂಬರಿಗಳನ್ನು ನವ್ಯ ಮಾರ್ಗದಲ್ಲಿ ಬರೆದವರು.. ವ್ಯಕ್ತಿಯ ಮಾನಸಿಕ ನಡಿಗೆಯನ್ನು ಶೋಧಿಸುವ ಕಡೆ ಹೆಚ್ಚು ಗಮನ ಕೊಟ್ಟರು. ಶಾಂತಿನಾಥ ದೇಸಾಯಿ ಅವರ 'ಮುಕ್ತಿ' ನವ್ಯ ಸಾಹಿತ್ಯದ ಮೊದಲ ಕಾದಂಬರಿ ಎನಿಸಿಕೊಂಡಿದೆ. ಇಲ್ಲಿ ಮನಸ್ಸಿನ ಲೆಕ್ಕಾಚಾರವನ್ನೆ ವಸ್ತುವಾಗಿಸಿಕೊಂಡಿದ್ದಾರೆ. ಆಧುನಿಕ ಬದುಕಿನ ಜಂಜಾಟಗಳಲ್ಲಿ ಸಿಲುಕಿದ ವ್ಯಕ್ತಿಗಳ ಜೀವನ ಲೆಕ್ಕಾಚಾರಗಳನ್ನು ಅವರ ಆಸೆಗಳನ್ನು ಯಶಸ್ವಿಯಾಗಿ ತಮ್ಮ ಕೃತಿಗಳಲ್ಲಿ ಹಿಡಿದಿಟ್ಟಿದ್ದಾರೆ.

ಹೀಗೆ ಕನ್ನಡ ಕಾದಂಬರಿ ಪರಂಪರೆಯ ನವೋದಯ, ಪ್ರಗತಿಶೀಲ, ನವ್ಯ ಹಾಗೂ ನವ್ಯೋತ್ತರ ಕಾಲಖಂಡಗಳಲ್ಲಿ ಹಲವಾರು ಸಾಮಾಜಿಕ ಮೌಲ್ಯಗಳನ್ನು, ಸಮಸ್ಯೆಗಳನ್ನು ಹೊಸ ಪ್ರಯೋಗಗಳೊಂದಿಗೆ ಕಂಡುಬರುತ್ತದೆ. ಪ್ರತಿಯೊಬ್ಬ ಕಾದಂಬರಿಕಾರನಿಗೂ ತನ್ನ ಹಿಂದಿನ ಒಂದು ಶತಮಾನದ ಸುಧೀರ್ಘ ಪರಂಪರೆಯ ಪ್ರಭಾವ ಬೀರಿವೆ. ಇತ್ತೀಚಿನ ಕನ್ನಡದ ಅನೇಕ ಕಾದಂಬರಿಕಾರರು ಹೇಳುವ ಹಾಗೆ ಕಾರಂತರ ಪ್ರಭಾವ ಎಲ್ಲರ ಮೇಲೂ ಆಗಿದೆ. ಹೀಗೆ ಕನ್ನಡ ಕಾದಂಬರಿಯ ಕ್ಷೇತ್ರ ಆರಂಭದ ಹಂತದಿಂದ ಇಂದಿನವರೆಗೂ ಗುಣ, ಗಾತ್ರಗಳೆರಡರಲ್ಲೂ ಹೆಮ್ಮರವಾಗಿ ಬೆಳೆದುಬಂದಿದೆ. ಕಾದಂಬರಿಗಳಲ್ಲಿ ಪ್ರಮುಖವಾಗಿ ದೇಶಭಕ್ತಿ, ಪ್ರಕೃತಿ, ಪ್ರೇಮ,

ಆದರ್ಶ, ಗ್ರಾಮೀಣ ಪರಿಸರದ ಅನುಭವ, ಆಧುನಿಕ ಜನಜೀವನ, ಸ್ವಾತಂತ್ರ ಹೋರಾಟ, ಸಮಾನತೆಯ ಹೋರಾಟ, ಶೋಷಣೆ, ಆತ್ಮವಿಮರ್ಶೆ, ಸತ್ಯಶೋಧನೆ, ಅಸ್ತಿತ್ವ ಅಸಂಗತ ವಾದಗಳು, ತಂತ್ರಗಾರಿಕೆ, ಭಾಷೆಯ ಪ್ರಾಧಾನ್ಯತೆ, ನಿರೂಪಣೆಯಲ್ಲಿ ಹೊಸತನ, ಸ್ತ್ರೀ ಪರ ಚಿಂತನೆಗಳು ಹೀಗೆ ಮುಂತಾದ ಅನೇಕ ಅಂಶಗಳು ಕನ್ನಡ ಕಾದಂಬರಿಗಳಲ್ಲಿ ಇರುವುದನ್ನು ನೋಡುತ್ತೇವೆ.

ನವ್ಯೋತ್ತರದ ಕಾದಂಬರಿಕಾರರಲ್ಲಿ ಕೃಷ್ಣಮೂರ್ತಿ ಹನೂರು ಅವರು ಒಬ್ಬರು. ಇವರು ಬರೆದ ಎರಡು ಕಾದಂಬರಿಗಳು ಹೊಸ ಬಗೆಯ ಚಿಂತನೆಯನ್ನು ಒದಗಿಸುತ್ತವೆ. ಇವರ ಮೊದಲ ಕಾದಂಬರಿ ಪ್ರಕಟವಾದದ್ದು ೧೯೮೫ ರಲ್ಲಿ ಆದರೆ ೮೦ ರ ದಶಕದಲ್ಲೇ ಹನೂರರು ಕಾದಂಬರಿಯನ್ನು ಬರೆಯಲು ಪ್ರಾರಂಭಿಸಿದರು. ಹನೂರ ಅವರಿಗೆ ತಮ್ಮ ಕ್ಷೇತ್ರಕಾರ್ಯದ ಅಪಾರ ಅನುಭವದಿಂದ ಜನಪದ ಸಂಸ್ಕೃತಿಯ ಆಳ, ಉದ್ದಗಳನ್ನು ಮೊದಲ ಕಾದಂಬರಿಯಾದ 'ಬಾರೊ ಗೀಜಗನೆ' ಕಾದಂಬರಿಯ ಮೂಲಕ ತೆರೆದಿಟ್ಟರು. "ಈ ಕಾದಂಬರಿಯನ್ನು ಬರೆಯಲು ಕ.ಮೆ. ರಾಜಗೋಪಾಲ್ ಅವರು ಕಾರಣವಾದರು"[೩] ಎಂದು ಅಂತರಂಗದ ಮಾತುಗಳಲ್ಲಿ ಹೇಳಿಕೊಳ್ಳುತ್ತಾರೆ. ಗೆಳೆಯರ ಪ್ರೋತ್ಸಾಹ, ಸಾಂಸಾರಿಕ ಸ್ನೇಹಿತರ ಪ್ರೋತ್ಸಾಹವೇ ಒಬ್ಬ ಉತ್ತಮ ಕಾದಂಬರಿಕಾರರನ್ನು ಗುರುತಿಸುವ ಪ್ರಯತ್ನ ಮಾಡಿದ್ದಾರೆ ಎನ್ನಬಹುದು. ಬೆನ್ನುಡಿಯಲ್ಲಿ ಮಾವಿನಕೆರೆ ರಂಗನಾಥನ್ ಅವರು ಹೇಳಿರುವ ಹಾಗೆ "ದೀನ ದಲಿತರ ಧ್ವನಿಯಾಗಿ ಬಾಳಾಚಾರಿಯ ಏಳುಬೀಳುಗಳನ್ನು ಕಥನದೊಂದಿಗೆ ಪರಿಸರ ಗಾಢತೆ, ವ್ಯಕ್ತಿ ವ್ಯಕ್ತಿಯ ಪ್ರವೃತ್ತಿ, ಸಂಘರ್ಷ, ಅಂತಃಕರಣ ಎಲ್ಲವೂ ಓದುಗನನ್ನು ಸ್ಪಂದಿಸುತ್ತದೆ ; ಭಾಷೆಯಲ್ಲಿ ಲೀನವಾದ ಹಾಸ್ಯ ವಿಡಂಬನೆ ಈ ನಿರರ್ಗಳ ಬರವಣಿಗೆಯಲ್ಲಿ ಜೀವಪರ ಮೌಲ್ಯಗಳನ್ನು ಪ್ರತಿಷ್ಠಾಪಿಸಿರುವಂತೆಯೇ, ಒಬ್ಬ ಸಮರ್ಥ ಕಾದಂಬರಿಕಾರನೂ ದೊರಕಿರುವುದನ್ನು ಖಚಿತಪಡಿಸುತ್ತದೆ"[೪] ಎಂಬ ಮಾತು ಸತ್ಯವಾಗಿದೆ.

'ನಿಕ್ಷೇಪ' ಕಾದಂಬರಿಯನ್ನು ೧೯೯೪ ರಲ್ಲಿ ಬರೆದ ಹನೂರರು ಮದರಾಸಿನ ಜನಜೀವನದ ಅನುಭವವನ್ನು ಆಧರಿಸಿ ಬರೆದಿದ್ದಾರೆ. ಇದು ಪ್ರಜಾವಣಿಯ ಸಾಪ್ತಾಹಿಕ ಪುರವಣಿಯಲ್ಲಿ ಪ್ರಕಟಣೆ ಗೊಂಡಿತು. ೨೦೦೧-೦೨ ರ ಅವಧಿಯಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪ್ರಥಮ ಪದವಿ ತರಗತಿಗಳಿಗೆ ಪಠ್ಯಪುಸ್ತಕವಾಗಿಯೂ ಆಯ್ಕೆಯಾಗಿತ್ತು. "ಈ 'ನಿಕ್ಷೇಪ' ಕಾದಂಬರಿ ಹೊರ ಜಗತ್ತಿಗೆ ಹಾಲು, ಹೂವು ಹಂಚಬಲ್ಲ ಮತ್ತು ಎಲ್ಲದಕ್ಕೂ ಪ್ರಕೃತಿಯನ್ನೆ ನಂಬಿ ಬದುಕುವ ಬುಡಕಟ್ಟು ಸಂಸ್ಕೃತಿಯ ಪ್ರತಿನಿಧಿಗಳು ಒಂದು ಕಡೆ ; ಸಿನಿಮಾ, ಲೇವಾದೇವಿ, ಮದ್ಯ ತಯಾರಿಕೆಯ ವ್ಯಾಪಾರ ಪ್ರಧಾನ ಬದುಕಿನ ಜಾಣರ ನಾಗರೀಕತೆಯ ಸುಖಭೋಗಗಳ ಭ್ರಮೆ ಇನ್ನೊಂದು ಕಡೆ. ಇದರೊಂದಿಗೆ ಸೃಷ್ಟಿಯ ಮೂಲಭೂತ ತತ್ವಗಳನ್ನೇ ಬುಡಮೇಲಾಗಿಸಿ ಅದನ್ನು ಕೇವಲ ಸರಕನ್ನಾಗಿ ನೋಡಲೆತ್ನಿಸಿರುವ ಪಾಶ್ಚಾತ್ಯ ವಿದ್ಯಾಮಾನಗಳು ; ಇದರ ನಡುವೆ ಯಾವುದು ಸ್ವೀಕಾರಾರ್ಹ, ಯಾವುದನ್ನು ಉಳಿಸಿ ಬೆಳಸಬೇಕೆನ್ನುವ ವಿವೇಚನೆ ಇಲ್ಲದೆ ಭೋಗ ಜೀವನ ರೀತಿ, ತನ್ನನ್ನು ತಾನೇ ನಾಶಮಾಡಿಕೊಳ್ಳುತ್ತ ಹೊರಟಿದೆಯೆಂಬುದೇ

ನಿಕ್ಷೇಪ ಕಾದಂಬರಿಯ ಕಥೆ"[೫] ಹೀಗೆ ನಿಕ್ಷೇಪ ಕಾದಂಬರಿಯಲ್ಲಿ ಮೂರು ಸಂಸ್ಕೃತಿಯನ್ನು ಕೇಂದ್ರವಾಗಿಟ್ಟುಕೊಂಡು ಬರೆದ ಹನೂರರು ಸಮಗ್ರ ಜೀವನದ ಅರ್ಥವನ್ನು ಸಮರ್ಥವಾಗಿ ತಮ್ಮ ಕಾದಂಬರಿಗಳಲ್ಲಿ ಶೋಧಿಸುತ್ತಾ ಬಂದಿದ್ದಾರೆ.

**<u>ಬಾರೊ ಗೀಜಗನೆ :-</u>**

ಕೃಷ್ಣಮೂರ್ತಿ ಹನೂರರು ಬರೆದ ಪ್ರಥಮ ಕಾದಂಬರಿಯೆ ಬಾರೋ ಗೀಜಗನೆ. ೧೯೮೯ ರಲ್ಲಿ ಪಕಟಗೊಂಡಿತು. ಇದಕ್ಕೂ ಮುಂಚೆ "೧೯೮೫ ರಲ್ಲಿಯೇ ಅಭಿಮಾನಿ ವಾರಪತ್ರಿಕೆಯವರು ಕಾದಂಬರಿ ಸ್ಪರ್ಧೆಯೊಂದನ್ನು ಏರ್ಪಡಿಸಿದ್ದರು. ಈ ಕಾದಂಬರಿ ಐದು ಸಾವಿರ ರೂಗಳ ದ್ವಿತೀಯ ಬಹುಮಾನ ಗಳಿಸಿದ್ದು ಮತ್ತೊಂದು ಉತ್ಸಾಹದಾಯಕ ಸಂಗತಿಯಾಗಿದೆ"[೬] ಎಂಭತ್ತರ ದಶಕದಲ್ಲಿ ಕ್ಷೇತ್ರಕಾರ್ಯದಲ್ಲಿ ತೊಡಗಿದ್ದ ಹನೂರರು ಸಂಗ್ರಹಿಸಿದ 'ಕತ್ತಲದಾರಿದೂರ' ಕಥನ ಗೀತೆಯಾದ ಗುಣಸಾಗರಿಯಲ್ಲಿ ಬರುವ 'ಒಂದು ಪರ್ಸಂಗ'ವಾಗಿದೆ. ಜನಪದ ಇಂತಹ ಗೀತೆಗಳ ಪ್ರತಿಸಾಲುಗಳಲ್ಲಿ ಜೀವನದ ಅರ್ಥ ತುಂಬಿರುತ್ತದೆ. ಒಂದು ಪರ್ಸಂಗ ಬದುಕಿನ ಹಲವು ಆಯಾಮಗಳನ್ನು ತೋರಬಲ್ಲದು. ಗುಣಸಾಗರಿಯ ಕತೆಯೂ ಸಂಸಾರದ ಸಮಸ್ಯೆಯನ್ನು ಒಳಗೊಂಡದ್ದು. ಚಿತ್ರದುರ್ಗದ ಚಳ್ಳಕೆರೆ ತಾಲ್ಲೂಕಿನ ಜನಪದ ಸಿರಿ ಎನಿಸಿದ್ದ ಸಿರಿಯಜ್ಜಿಯಿಂದ ಸಂಗ್ರಹವಾದದ್ದು ಗುಣಸಾಗರಿ ಕತೆ. ಈ ಕಾದಂಬರಿಗೆ ಮೊದಲೆ ಹನೂರರು ಜನಪದ ಆಶಯ, ಬುಡಕಟ್ಟು ಸಂಸ್ಕೃತಿ, ಕಲೆ ಹಾಗೂ ಜನಪದ ನಿರೂಪಕರಾಗಿ ಬಿದ್ದ ಶಿಕಾರಿ, 'ಕುಂಡಜ್ಜನ ಪರ್ಸಂಗ' ಕಥೆಗಳಲ್ಲಿ ಭರವಸೆ ಮೂಡಿಸಿದ್ದರು. ಹೀಗೆ ಜನಪದ ಲೇಖನಗಳು, ಕತೆಗಳನ್ನು ಬರೆಯಲು ತೊಡಗಿಕೊಂಡ ಮೇಲೆ ಸೃಜನಶೀಲ ಬರಹಗಾರರೆನಿಸಿದರು. ಇದರ ಪರಿಣಾಮವಾಗಿಯೆ "೧೯೮೫ ರಲ್ಲಿ 'ಬಾರೊ ಗೀಜಗನೆ' ಕಾದಂಬರಿ ಹೊರಬಿತ್ತು. ಅದರಲ್ಲಿ ಒಬ್ಬ ಜನಪದ ಕಲಾವಿದ ಕುಲವೃತ್ತಿ ಇಟ್ಟು ಜನಪದ ಕಲೆಯೆಡೆಗೆ ಹೊರಳುತ್ತಾನೆ. ಬೊಂಬೆಯಾಡಿಸುವುದರತ್ತ, ಕರ್ಮಸಿದ್ಧಾಂತವನ್ನು ಅಲ್ಲಗಳೆಯುವ ವಸ್ತು ವ್ಯವಹಾರ ಅದು"[೭] ಎಂಬ ತಿಪ್ಪೇಸ್ವಾಮಿಯವರ ಹೇಳಿಕೆ ಸ್ವೀಕಾರಾರ್ಹ.

ಕಾದಂಬರಿಗೆ ಹಿನ್ನೆಲೆಯಾಗಿ ಒಂದು ಜನಪದ ಸಾಹಿತ್ಯವಿದೆ. ಬದುಕಲ್ಲಿ ನಡೆದ ಯಾವುದೋ ಪರ್ಸಂಗವನ್ನು ಗೀತೆಯ ರೂಪದಲ್ಲಿ ಕಟ್ಟಿ, ಮುಂದಿನ ಜನಾಂಗಕ್ಕೆ ಒಳಿತು ಕೆಡುಕನ್ನು ಹೇಳುವ ಜನಪದ ಸಾಹಿತ್ಯ ಗ್ರಾಮೀಣ ಜನರ ಜೀವನಾಡಿ. ಆದರೆ ಹನೂರರು ಜನಪದ ಸಾಹಿತ್ಯವನ್ನು ಒಂದು ಹೊಸ ಆಯಮದೊಂದಿಗೆ ಕಾದಂಬರಿಯಂತಹ ಶಿಷ್ಟಪ್ರಕಾರಕ್ಕೆ ಪರಿವರ್ತಿಸಿ ಎಲ್ಲರದಾಗಿಸಿದ್ದಾರೆ. ಇಲ್ಲಿ ಬಾಳಾಚಾರಿಯೇ ಕೇಂದ್ರ ಪಾತ್ರ. ಈತನ ಸಂಸಾರದ ಸುತ್ತಲೇ ಕಾದಂಬರಿಯು ಕತೆಯೊಳಗೆ ಕತೆಯಾಗಿ ಅನಾವರಣಗೊಳ್ಳುತ್ತದೆ. ಅಪ್ಪ ಹಾಕಿದ ಆಲದ ಮರಕ್ಕೆ ಕಟ್ಟು ಬೀಳದೆ ತಾನೇ ಸ್ವತಂತ್ರನಾಗಿ ಹೊಸ ದಾರಿಯಲ್ಲಿ ನಡೆಯಬೇಕೆಂದು ಹೊರಡುವ ಬಾಳಾಚಾರಿ ಎದುರಿಸುವ ಕಷ್ಟಗಳು ಅನೇಕ. ಕುಲದಿಂದಲೇ ಜಾತಿ ಬಂದಿದ್ದು ಎಂಬ ಮಾತನ್ನು ನೆನೆಯುವುದಾದರೆ ಸಿದ್ದಾಚಾರಿಯ

ಮಗ ಬಾಳಾಚಾರಿ ತನ್ನ ಕುಲಮೆ, ಮರಗೆಲಸ ಮಾಡಬೇಕಿತ್ತು. ಆದರೆ ಬಾಳಾಚಾರಿ ತನ್ನ "ಅಪ್ಪ ಯಾವ ಕಾಲದಿಂದ ಈ ಗುಳ ತಟ್ಟುವ, ಮರ ಕೆತ್ತುವ ಬದುಕು ಮಾಡಿಕೊಂಡು ಬರುತ್ತಿರುವನೋ? ಕೈಗಾದರೆ ಬಾಯಿಗಾಗದ, ಬಾಯಿಗಾದರೆ ಹೊಟ್ಟೆಗೆಟುಕದ ಕೆಲಸ, ಹತ್ತುಮಂದಿಯಲ್ಲಿ ಒಂಭತ್ತು ಜನ 'ಕಾಸಿಲ್ಲ ಸಿದ್ದಣ್ಣೋ, ಬೆಳೆ ಬರ್‍ಲಿ, ಕಾಳುಕೊಟ್ಟೇವು, ವಸಿ ಅಲ್ಲಿಗಂಟ ತಡಕ”’ ಎಂಬ ಮಾತುಗಳಿಂದ ಬಡತನ, ಹಸಿವುಗಳಿಗೆ ಈ ಜನರಿಂದ ಪರಿಹಾರ ನೀಗುವುದಿಲ್ಲವೆಂಬ ಚಿಂತೆಯಿಂದ ಊರುಬಿಟ್ಟು ನಾನಾ ಕಷ್ಟಗಳಿಂದ ಕೊನೆಗೆ ಸಾಯುತ್ತಾನೆ. ಆದರೆ ಬಾಳಾಚಾರಿಯ ನೂತನ ಬದಲಾವಣೆಯ ಹರಿಕಾರನಾಗಿ ಕಾಣುತ್ತಾನೆ. ಪಿತ್ರಾರ್ಜಿತವಾಗಿ ಬಂದ ಕಸುಬನ್ನು ತಿರಸ್ಕರಿಸಿ ಜಾತೀಯತೆಯನ್ನು ಮುರಿಯುವ ಪ್ರಯತ್ನ ಮಾಡಿದ್ದಾನೆ. ತಾನೇ ಕಲಿತ ಗೊಂಬೆಯಾಟವನ್ನು ಜಾತಿ ಭೇದವಿಲ್ಲದೇ ಎಲ್ಲರನ್ನೂ ಒಂದುಗೂಡಿಸುವುದಕ್ಕೆ ಬಳಸುತ್ತಾನೆ. ಇದರಿಂದ ಮೇಲ್ವರ್ಗದ ಕೆಂಗಣ್ಣಿಗೆ ಗುರಿಯಾಗಿ ಬದುಕನ್ನು ಕಳೆದುಕೊಳ್ಳುತ್ತಾನೆ. ಆದರೆ ತನ್ನಲ್ಲಿ ಅಡಗಿದ್ದ ಕಲಾವಂತಿಕೆಯನ್ನು ಮತ್ತೆ ಬಳಸಿ ಬದುಕು ಕಟ್ಟಿಕೊಳ್ಳುತ್ತಾನೆ. ಇದು ಹನೂರರು ಹೊಸದಾಗಿ ಹೇಳಹೊರಟ ವಿಷಯ. ಕೆಳವರ್ಗದ ಜನರು ಶೈಕ್ಷಣಿಕವಾಗಿ ಬದಲಾಗಿ ನಾಶ ಮಾಡಲಾಗದ ವಿದ್ಯೆಗಳ, ಕಲೆಗಳ ಕಡೆ ಹೊರಳಬೇಕೆಂಬುದು. ಆದರೆ ಹನೂನರು ಕಾದಂಬರಿಯಲ್ಲಿಯೇ ಕೆಳವರ್ಗದವರ ತುಳಿತಕ್ಕೆ ಕಾರಣವಾಗುವ ಅವರ ವೈಯಕ್ತಿಕ ದುರಭ್ಯಾಸಗಳನ್ನು ಒತ್ತಿಹೇಳುವ ಪ್ರಯತ್ನ ಮಾಡಿದ್ದಾರೆ.

ಕಾದಂಬರಿಯು ಪ್ರಾರಂಭವಾಗುವುದೇ ಸಿದ್ಧಾಚಾರಿಯ ಕುಲುಮೆಯ ಸದ್ದಿನ ಮೂಲಕ. ಕಲ್ಲವ್ವನ ಹಳ್ಳಿ ಅಲ್ಲದೇ ಸುತ್ತಮುತ್ತಲ ಗ್ರಾಮಗಳಿಗೆಲ್ಲ ಸಿದ್ಧಾಚಾರಿ ಒಬ್ಬನೇ ಕುಲಕಸುಬು ಮುಂದುವರೆಸಿಕೊಂಡು ಗಾಡಿಪಟ್ಟೆ, ನೇಗಿಲು, ಚೂರಿ ಮತ್ತು ಮರಗೆಲಸ ಮಾಡಿಕೊಂಡು ಹೋಗುತ್ತಿದ್ದವನು. ಸಿದ್ಧಾಚಾರಿ ತುಂಬಾ ಶ್ರಮಜೀವಿ. ಬೆಳಗಿನಿಂದ ಸಂಜೆವರೆಗೂ ದುಡಿದರೂ ಬದುಕು ಮೂರಾಬಟ್ಟೆಯಾಗಿತ್ತು. ಇದನ್ನೆಲ್ಲಾ ನೋಡುತ್ತಿದ್ದ ಒಬ್ಬನೇ ಮಗ ಬಾಳಾಚಾರಿ ಎಲ್ಲರ ಕಣ್ಣಿಗೂ ಪೆದ್ದನ ಹಾಗೆ ಕಾಣುವುದು ಹಾಸ್ಯಾಸ್ಪದ. ಸಿದ್ಧಾಚಾರಿ ತನ್ನ ಕೆಲಸದ ಆಳ ಉದ್ದ ತಿಳಿದಷ್ಟು ತನ್ನ ಮಗನ ಬಗ್ಗೆ ತಿಳಿಯಲಾಗದ್ದು ತನ್ನ ಕುಲಕಸುಬಿನ ಮೇಲಿದ್ದ ಅಭಿಮಾನದಿಂದಲೇ. ಈ ಯೋಚನೆಯಿಂದಲೆ ಊರವರು ಹೇಳಿದ ಹಾಗೆ ಬಾಳಾಚಾರಿಗೆ ಲಗ್ನ ಮಾಡು ಜವಾಬ್ದಾರಿ ತಿಳಿದು ದುಡಿಯುವನು ಎಂಬ ಚಿಂತೆ ತಲೆಗತ್ತಿ ಆಲಗೊಂಡನ ಹಳ್ಳಿಯ ಪುಟ್ಟತಾಯಮ್ಮನನ್ನು ತಂದು ಮದುವೆ ಮಾಡಿದ. ಆದರೆ ಭಂಡ ಶ್ರಮ ವಹಿಸಿ ದುಡಿದು ಪ್ರತಿಫಲವೇ ಸಿಗದ ಸಿದ್ಧಾಚಾರಿಗೂ, ದುಡಿದಷ್ಟು ಬದುಕು ಸುಖಕರವಾಗಬೇಕೆಂದು ಬಯಸುವ ಬಾಳಾಚಾರಿಗೂ ಪರಂಪರೆಯ ಮುಖಾ ಮುಖಿಯಾಗುತ್ತದೆ. ಹಿಂದಿನ ಪರಂಪರೆಯ ವಿರುದ್ಧ ದಿಕ್ಕಿನಲ್ಲಿ ಅಸ್ತಿತ್ವ ಹುಡುಕಿ ಹೊರಡುವ ಬಾಳಾಚಾರಿ ಸಂಸ್ಕೃತಿಯ ಮರುಹುಟ್ಟಿನೊಡನೆ ತನ್ನನ್ನು ಗುರುತಿಸಿಕೊಳ್ಳುವ ಪ್ರಯತ್ನ ಮಾಡುತ್ತಾನೆ.

ಹೀಗೆ ಬಾಳಾಚಾರಿ ಹೊಸ ಉತ್ಸಾಹದ ಅಲೆಯಲ್ಲಿ ತಂದೆ, ತಾಯಿ, ಹೆಂಡತಿಯನ್ನು ಬಿಟ್ಟು ಊರನ್ನೇ ಬಿಟ್ಟು ಹೊರಡುತ್ತಾನೆ. ದಾರಿಯಲ್ಲಿ ಪರಿವೇ ಇಲ್ಲದ ಬಾಳಾಚಾರಿಗೆ ಬೆಟ್ಟಕ್ಕೆ ಹೊರಟವರ ಸದ್ದು ಕೇಳಿತು. ಅವರಲ್ಲಿ ಒಬ್ಬ ಕಂಸಾಳೆಯವ –

"ಅಂಗದ ಮ್ಯಾಲಿನ ಲಿಂಗದ ರೂಪಿನ
ಸಂಗಮೇಶಾ ಮಾದಪ್ಪ ।
ಮೂಡಲ ಗಿರಿಯಲಿ ನೆಲೆಸಿಹ ಮಾದಪ್ಪ
ಮತಿಗಳ ಕರುಣಿಸೋ ಮಾದೇವ ॥"

ಎಂದು ಮಹದೇಶ್ವರನನ್ನು ಹಾಡಿ ಹೊಗಳಿ ನಡಿಗೆಯಲ್ಲಿ ಹೊರಟಿದ್ದರು. ಒಂಟಿಯಾಗಿ ಕಂಗಾಲಾಗಿದ್ದ ಬಾಳಾಚಾರಿಗೆ ಹಸಿವು ಕಾಡತೊಡಗಿತು. ಪರಿಷೆ ಹೋಗುತ್ತಿದ್ದ ಜನರೊಡನೆ ಸೇರಿ ಅವರೊಡನೆ ಉಂಡು–ತಿಂದು ಬೆಟ್ಟ ಸೇರಿದ. ಬದುಕಿನಲ್ಲಿ ಬಹುಬೇಗ ಎದುರಿಸುವ ಸವಾಲು ಹಸಿವು. ಹಾಗಾಗಿ ಕಾಲಕಾಲಕ್ಕೆ ತಿಂದು ತೇಗುತ್ತಿದ್ದ ಬಾಳಾಚಾರಿಗೆ ದೇವರಿಗೆ ಎಡೆಯಾಗಿ ಎಸೆದ ಜವನ ಹಣ್ಣು ಆಯ್ದು ತಿಂದ. ಹೊಟ್ಟೆ ತುಂಬದೇ ಹತ್ತಾರು ಹಣ್ಣು ತಿನ್ನಲು ಹೋಗಿ ಏಟು ತಿಂದು ಅಲ್ಲಿಂದ ಮಠಕ್ಕೆ ಹೋಗಿ ನಾಲ್ಕು ದಿನ ಊಟ ಮಾಡಿ ಐದನೇ ದಿನ ಅಲ್ಲಿಂದಲೂ ಹೊಡೆದು ಈಚೆ ತಳ್ಳಿದರು.

ಏನೋ ಹೊಸ ಚಾಕರಿ ಮಾಡಿ ಬದುಕಬೇಕೆಂದು ಮನೆ ಬಿಟ್ಟ ಬಾಳಾಚಾರಿಗೆ ಈಗ ಕೆಲಸಕ್ಕಿಂತ ಹಸಿವು ತುಂಬುವುದೇ ಹೊರೆಯಾಯಿತು. 'ಆಸರೆಯಿಲ್ಲದ ಬದುಕು ನಾಯಿಯಂತೆ' ಎಂಬ ವಾಕ್ಯ ಬಾಳಾಚಾರಿಗೆ ಅನುಭವವಾಗಿತ್ತು. ಹಾಗಾಗಿ ಅನ್ನಕ್ಕಾಗಿ ಬಳೆ ಮಾರುವ ಜವನಗೊಂಡನ ಹಳ್ಳಿ ರಾಚಮ್ಮನ ಜೊತೆ ಸೇರಿ ಅವಳ ಮನೆ ಕೆಲಸಕ್ಕೆ ಸೇರುತ್ತಾನೆ. ಹನೂರರು ತಮ್ಮ ಕಾದಂಬರಿಯಲ್ಲಿ ಹಸಿವನ್ನು ಪ್ರಮುಖ ಸಮಸ್ಯೆಯಾಗಿ ತೋರಿಸುತ್ತ, ಅದಕ್ಕಾಗಿಯೇ ಎಲ್ಲರೂ ಹೊಡೆದಾಟ ನಡೆಸುವ ಪರಿಯನ್ನು ವಿವರಿಸಿದ್ದಾರೆ. ಹಸಿವು ಗೆದ್ದವನು ಬದುಕನ್ನೇ ಗೆಲ್ಲಬಲ್ಲ ಎಂಬ ಅಂಶ ಕಾದಂಬರಿಯಲ್ಲಿ ಹಂತ ಹಂತದಲ್ಲೂ ತಿಳಿಯುತ್ತದೆ.

ಕಾದಂಬರಿಯಲ್ಲಿ ಬರುವ ಸ್ತ್ರೀ ಪಾತ್ರಗಳು ವಿಶೇಷ ಗಮನ ಸೆಳೆಯುತ್ತವೆ. ರಾಚಮ್ಮ ಗಂಡನನ್ನು ಕಳೆದುಕೊಂಡು ತವರು ಸೇರುತ್ತಾಳೆ. ಆದರೂ ಅಣ್ಣನ ಹೆಂಡತಿ ತೆಗೆದ ಜಗಳಕ್ಕೆ ವಾಪಸು ಬಂದು ಗಂಡನ ಮನೆ ಸೇರಿ ಬಳೆ ವ್ಯಾಪಾರ ಶುರುಮಾಡಿದ್ದಳು. ಇಲ್ಲಿ ಊರ ಗೌಡರ ಮೋಹಕ್ಕೆ ಸಿಕ್ಕು ಮೋಸ ಹೋಗಿ ಒಂಟಿಯಾಗಿದ್ದವಳಿಗೆ ಬಾಳಾಚಾರಿ ಊಟಕ್ಕಾಗಿ ಜೊತೆ ಸೇರುತ್ತಾನೆ. ರಾಚಮ್ಮನ ಪಾತ್ರ ಮುಗ್ಧತೆಯಿಂದಲೂ, ಪ್ರತಿಭಟನೆಯಿಂದಲೂ ಕಂಡುಬರುತ್ತದೆ. ಗಂಡು–ಹೆಣ್ಣು ಸಂಬಂಧ ಲೈಂಗಿಕ ಶೋಷಣೆಯ ಸ್ವರೂಪ ಪಡೆದು ರಾಚಮ್ಮ ಬಲಿಯಾಗುತ್ತಾಳೆ. ರಾಚಮ್ಮ ಎಲ್ಲ ರೀತಿಯಿಂದಲೂ ಮೋಸಕ್ಕೆ ಸಿಲುಕಿ ವ್ಯಥೆ ಪಡುತ್ತಾಳೆ. ಕೂಡಿಟ್ಟ ಹಣವೆಲ್ಲ ಕಳ್ಳತನವಾಗಲು ಬಾಳಾಚಾರಿ ಮಾಡದ ತಪ್ಪಿಗೆ ಕಳ್ಳತನದ ಆರೋಪ ಹೊತ್ತು ಅಲ್ಲಿಂದ ಹೊರಡುತ್ತಾನೆ.

ಹೀಗೆ ಕಾದಂಬರಿ ಪ್ರಧಾನ ವಸ್ತುವಿಗೆ ಉಪಕಥಾವಸ್ತುಗಳು ಪೂರಕವೆಂಬಂತೆ ಸಾಗಿ ಒಂದನ್ನೊಂದು ಉತ್ತಮ ಸಂಬಂಧ ಹೊಂದಿ ಕಾದಂಬರಿ ವಿಭಿನ್ನ ಶೈಲಿಯಿಂದ ಕೂಡಿದೆ. ಕತೆಯೊಳಗೆ ಕತೆನೇಯುವ ಪ್ರೌವೃತ್ತಿ ಜನಪದದಲ್ಲಿ ಹೊಸದಲ್ಲ, ಆದರೆ ಕಾದಂಬರಿಯಂತಹ ಪ್ರಕಾರದಲ್ಲಿ ಸೃಜನಶೀಲ ಬರವಣಿಗೆಯ ಒಳಗೆ ಜನಪದ ತಂತ್ರವನ್ನು ಹನೂರರು ಯಶಸ್ವಿಯಾಗಿ ಬಳಸಿಕೊಂಡಿದ್ದಾರೆ. ಬಾಳಾಚಾರಿಯು ಬದುಕು ಕಟ್ಟಲು ಎಲ್ಲೆಲ್ಲಿ ನಿಲ್ಲುತ್ತಾನೋ, ಅಲ್ಲಿನ ಹಿನ್ನೆಲೆಯನ್ನು ಕೊಡುವ ಹನೂರರು ಓದುಗನಿಗೆ ಬೇಸರ ತರಿಸುವುದೇ ಇಲ್ಲ. ಹೀಗೆ ಬಾಳಾಚಾರಿ ಸಿದ್ಧಾಪುರದಲ್ಲಿ ಗೊಂಬೆಯಾಟದವರನ್ನು ಸೇರುತ್ತಾನೆ. ಮೊದಲೇ ಮರಗೆಲಸ ತಿಳಿದಿದ್ದರಿಂದ ಗೊಂಬೆಗಳನ್ನು ಕೆತ್ತುವುದು, ಬಣ್ಣ ಹಚ್ಚುವುದು ಕಲಿತ. ಚೆನ್ನಯ್ಯನೊಡನೆ ಸೇರಿ ಬೊಂಬೆಯಾಟದ ಎಲ್ಲ ವಿಧಾನಗಳನ್ನು ಕಲಿತನು. ಆದರೆ ಇದಕ್ಕಾಗಿ ಅವರು ಕತ್ತೆ ಮೇಯಿಸುವುದು, ಹೇಳಿದ ಎಲ್ಲ ಕೆಲಸಗಳನ್ನು ಮಾಡುತ್ತಿದ್ದ. ಇಲ್ಲೂ ಅವನನ್ನು ಬೆಂಬಿಡದ ಸಮಸ್ಯೆ ಕಾಡಿತು. ಚೆನ್ನಯ್ಯನ ಮಗಳು ಗೌರಿ ಇವನನ್ನು ಪ್ರೀತಿಸುವಳು. ಆದರೆ ಮುಗ್ಧ ಬಾಳಾಚಾರಿಗೆ ಅರಿವಿಲ್ಲದೆ ಹೊಡೆತ ಬಿದ್ದು ಅಲ್ಲಿಂದ ತನ್ನ ಊರೆ ಸರಿ ಎಂಬ ಯೋಚನೆ ಹೊಳೆದು ಅಲ್ಲಿಂದ ಹೊರಡುತ್ತಾನೆ.

ಮಾದಯ್ನ ಬೆಟ್ಟ, ಜವನಗೊಂಡನಹಳ್ಳಿ, ಸಿದ್ಧಾಪುರಗಳಲ್ಲಿ ಅವನಿಗಾದ ಒಂದೊಂದು ಅನುಭವವೂ ಮತ್ತೆ ಊರಿನ ಕಡೆಗೆ ಮುಖ ತಿರುಗಿಸುತ್ತದೆ. ಇತ್ತ ಮಗನನ್ನು ಕಳೆದುಕೊಂಡ ದುಃಖದಲ್ಲಿ ಸಿದ್ಧಾಚಾರಿ ಅವರು ಹೆಂಡತಿ ತೀರಿಕೊಂಡಿದ್ದರು. ಗಂಡ ಬಿಟ್ಟು ಹೋದರೆ ಹೆಣ್ಣಿನ ಪಾಡು ಏನೆಂಬುದನ್ನು ಹನೂರರು ಸಾಮಾಜಿಕ ನೆಲೆಯಲ್ಲಿ ನಿಂತು ನೋಡುವ ಪ್ರಯತ್ನ ಮಾಡಿದ್ದಾರೆ. ಕಾದಂಬರಿಯಲ್ಲಿ ಬರುವ ನಾಲ್ಕು ವಿಭಿನ್ನ ಸಮಸ್ಯೆಗಳೆಂದರೆ, ಬಾಳಾಚಾರಿ ಬಿಟ್ಟುಹೋದ ಹೆಂಡತಿ ಪುಟ್ಟತಾಯಮ್ಮನ ಪಾಡು, ಗಂಡನನ್ನು ಕಳೆದುಕೊಂಡ ರಾಚಮ್ಮನ ಪಾಡು, ಅನ್ಯೋನ್ಯತೆ ಇಲ್ಲದ ರುಕ್ಮಿಣಿಯ ಸಂಸಾರ, ಹೆಂಡತಿ ಇದ್ದು ಇನ್ನೊಂದು ಹೆಣ್ಣಿನ ಸಹವಾಸ ಮಾಡಿದ ಪಾರ್ವತಿಯ ಗಂಡ, ಹೀಗೆ ಈ ನಾಲ್ಕು ವಿಭಿನ್ನ ಸಮಸ್ಯೆಗಳು ಕಾದಂಬರಿಯ ಒಳಗೆ ಕಾಣುತ್ತವೆ.

ಹನೂರರು ಹೆಣ್ಣಿನ ಸಮಸ್ಯೆಗೆ ಹೆಚ್ಚು ಒತ್ತು ನೀಡುತ್ತಲೇ ಗಂಡಿನ ನಡತೆಯನ್ನು ಪ್ರಶ್ನಿಸುತ್ತಾರೆ. ಬಾಳಾಚಾರಿ ತಿರುಗಿ ಕಲ್ಲವ್ವನ ಹಳ್ಳಿಗೆ ಬರುವವರೆಗೆ ತನ್ನ ಹೆಂಡತಿ, ಮಗುವನ್ನು ಎಲ್ಲೂ ನೆನೆಯದೇ ಇರುವುದು ಸೋಜಿಗವೇ ಸರಿ. ಜವಾಬ್ದಾರಿಯಿಂದ ಪಲಾಯನ ಮಾಡಿ ಯಾರಿಗಾಗಿ ಬದುಕಲು ಬಾಳಾಚಾರಿ ಪ್ರಯತ್ನಿಸಿದ ಎಂದು ತಿಳಿಯುವುದೇ ಇಲ್ಲ. ಸಂಸಾರ ತ್ಯಜಿಸಿ ಹೊಸ ಬದುಕು ಕಟ್ಟುವ ಬಾಳಾಚಾರಿಯ ದುರ್ಬಲ ಮನಸ್ಸು ಇಲ್ಲಿ ಸೋಲುತ್ತದೆ. ತನ್ನ ಗಂಡ ಮತ್ತೆ ಬಂದನೆಂಬ ಸಂತಸದಲ್ಲಿ ಪುಟ್ಟತಾಯವ್ವ ಹಳೆಯದನ್ನೆಲ್ಲ ಮರೆಯುವ ಭಾರತೀಯ ಸ್ತ್ರೀಯೆ ಆದಳು.

ಊರಿಗೆ ಬಂದ ಬಾಳಾಚಾರಿ ತಾನು ಕಲಿತ ಗೊಂಬೆಯಾಟಕ್ಕಾಗಿ ಗೊಂಬೆಗಳನ್ನು ಕೆತ್ತಿ ಸಿಂಗಾರ ಮಾಡಿದ. ಜಾತಿ ಸೊಂಕಿಲ್ಲದ ಬಾಳಾಚಾರಿ ಎಲ್ಲರನ್ನೂ

ಸೇರಿಸಿಕೊಂಡು ಆಟ ಶುರುಮಾಡಿದ. ಇದು ಮೇಲ್ವರ್ಗದವರ ಅರಿವಿಗೆ ಬಂದು ನ್ಯಾಯಕ್ಕೆ ಕರೆದು ಬುದ್ಧಿ ಹೇಳುವ ನಾಲ್ಕು ಮತಾಡಿದರು "ಅಲ್ಲಲೇ ಬಾಳ ಈ ಭೂಮಿ ಮ್ಯಾಗಳ ನೂರೆಂಟು ಜಾತಿ ಕುಲಗೋತ್ರಾನೂ ಮಾಡುದ್ದು ಯಾರಯ್ಯ? ಆ ಭಗವಂತನಲ್ವ? ವಲಮಾದಗರೂ ಒಂದಿಯಾ, ನಾವ್ಗಳೂ ಒಂದಿಯಾ"[10] ಎಂದು ಬಾಳಾಚಾರಿಗೆ ಹೇಳಿದರೂ ಯಾವುದನ್ನೂ ಲೆಕ್ಕಿಸದ ಪಕ್ಕದ ಹಳ್ಳಿಗೆ ಮೊದಲ ಆಟಕ್ಕೆ ಒಪ್ಪಿ ಹೊರಟ. ಜಾತಿ ಕೂಡ ಸಮಸ್ಯೆಯಾಗಿ ಅವನ ಮೇಲೆ ಸಂಚು ಹೂಡುತ್ತದೆ. ಸಮಾಜದೊಳಗಿನ ಮಡಿವೆಂತಿಕೆ, ಮೇಲು-ಕೀಳು ಇಂದಿನದಲ್ಲ. ಅದು ಅನಾದಿಕಾಲದ್ದು, ಅದರಲ್ಲೂ ಹಳ್ಳಿಗಳಲ್ಲಂತೂ ಮುಟ್ಟುವುದರಿಂದ ಹಿಡಿದು ಕುಡಿಯುವ ನೀರಿನವರೆಗೂ ಜಾತಿ ಪ್ರಭಾವ ಬೀರುತ್ತದೆ. ಹಾಗಾಗಿ ಬಾಳಾಚಾರಿ ಊರಿಗೆ ಅನ್ಯಾಯ ಎಸಗಿದವನು, ಮಡಿವಂತೆಯನ್ನು ಹಾಳುಮಾಡಿದವನೆಂದು ಅವನ ಗೊಂಬೆಗಳನ್ನೆಲ್ಲಾ ಬರುತ್ತಿದ್ದ ಗಾಡಿ ಸಮೇತ ಸುಟ್ಟುಹಾಕುತ್ತಾರೆ.

ತನ್ನ ಊರಲ್ಲೂ ನೆಲೆಯೂರಲಾಗದೆ ಬಾಳಾಚಾರಿ ಸಂಸಾರದ ಸಮೇತ ಓಬವ್ವನ ಹಳ್ಳಿಗೆ ಗುಳೆಹೊರಡುತ್ತಾನೆ. ಅಲ್ಲಿ ಅವನಿಗೆ ಸಹಕಾರ ದೊರೆತು ಗೊಂಬೆಗಳನ್ನು ಮತ್ತೆ ಸಿದ್ಧಪಡಿಸಿಕೊಂಡು ನೆಲೆಯೂರುವ ಪ್ರಯತ್ನ ಮಾಡುತ್ತಾನೆ. ಬಾಳಾಚಾರಿಯಂತಹ ಪಾತ್ರಗಳು ಸಮಾಜದೊಳಗೆ ತುಳಿತಕ್ಕೊಳಗಾದವರ ಪರವಾಗಿ, ಅವರ ಧ್ವನಿಯಾಗಿ ಕಂಡುಬರುತ್ತವೆ. ಪ್ರತಿಯೊಂದು ಹಂತದಲ್ಲೂ ಅವನನ್ನು ಜಾತಿ, ಹಸಿವು, ಸಂಶಯಗಳು ತುಳಿಯುತ್ತವೆ. ನೊಂದವರನ್ನೇ ನೋಯಿಸುವ ಈ ದುಷ್ಟ ಸಮಾಜದ ವಿರುದ್ಧ ಬಾಳಾಚಾರಿ ಸೆಣಸಾಡುತ್ತಾನೆ. ಆದರೂ ಎಲ್ಲೂ ಸಹ ಅವನ ಆತ್ಮವಿಶ್ವಾಸ ಕಡಿಮಯಾಗುವುದೇ ಇಲ್ಲ. ಬದುಕಿನ ಕಡೆ ಮುಖ ಮಾಡಿ ನಿಲ್ಲುವ ಬಾಳಾಚಾರಿ ಸೋಲಲ್ಲೂ ಗೆಲುವು ಕಾಣುತ್ತಾನೆ. ಬದುಕಿಗಾಗಿ ಮನೆಬಿಟ್ಟು ಹೋಗಿ ನಾನಾ ಕಷ್ಟಗಳ ಅನುಭವಿಸಿ ಕೊನೆಗೆ ಊರು ಸೇರಿದರೂ ಅವನು ದುಶ್ಚಟಗಳಿಗೆ ಬಲಿಯಾಗದಿರುವುದು ಉತ್ತಮ.

ಹೀಗೆ ಗೊಂಬೆಯಾಟದಿಂದ ಬರುತ್ತಿದ್ದ ಪುಡಿಗಾಸಿನಲ್ಲಿ ಕುಟುಂಬ ಹತ್ತು ಹದಿನೈದು ವರ್ಷ ಕಳೆಯಿತು. ಪ್ರಾಯಕ್ಕೆ ಬಂದ ಇಬ್ಬರು ಹೆಣ್ಣು ಮಕ್ಕಳಲ್ಲಿ ಮೊದಲನೆಯವಳಾದ ರುಕ್ಮಿಣಿಯನ್ನು ಭೈಲಾಪುರದ ನರಸಿಂಹಯ್ಯನಿಗೂ, ಎರಡನೆಯವಳಾದ ಪಾರ್ವತಿಯನ್ನು ನಾಟಕ ಕಂಪನಿಯ ಸಂಗಣ್ಣನಿಗೂ ಕೊಟ್ಟು ಮದುವೆ ಮಾಡಿದ. ಕಾದಂಬರಿಕಾರರು ಬಾಳಾಚಾರಿಯ ಹೆಣ್ಣು ಮಕ್ಕಳ ಬದುಕಿನ ವೈಯುಕ್ತಿಕ ಹಿನ್ನೆಲೆಯನ್ನು ಕೊಡುತ್ತಾರೆ. ಸಂಸಾರದಲ್ಲಿ ಹೆಣ್ಣು ಸೋತು ನಡೆದಷ್ಟು ಗಂಡಿನಲ್ಲಿ ಅನ್ಯೋನ್ಯತೆ ಕಂಡುಬರುವುದಿಲ್ಲ. ಸಾಮಾಜಿಕ ಸ್ವಾತಂತ್ರ್ಯವೂ ಹೆಣ್ಣಿಗೆ ಪೂರ್ಣ ದೊರಕದೆ ಅವಳನ್ನು ಬಂಧಿಸಿದ್ದ ಭಾರತೀಯ ಸಂಸ್ಕೃತಿಯು, ಹೆಣ್ಣನ್ನು ಕಟ್ಟಿ ಆಳಿದ್ದು ಸತ್ಯ. ಹಾಗಾಗಿ ಹನೂರರು ಹೆಣ್ಣಿಗೆ ಸ್ವತಂತ್ರ ಅಸ್ತಿತ್ವ ನೀಡುವ ಪ್ರಯತ್ನ ಮಾಡಿದ್ದಾರೆ.

ಬಾಳಾಚಾರಿ ಮಗಳಾದ ರುಕ್ಮಿಣಿ ಗಂಡ ನರಸಿಂಹ ಉತ್ತಮ ನಡವಳಿಕೆಯವನಾದರೂ ಅನ್ಯೋನ್ಯತೆಯಿಲ್ಲದವರ ಹಾಗೆ ಗಂಟು ಮುಖ ಹಾಕಿಕೊಂಡು ಗದರುತ್ತಿದ್ದ. ಪುರುಷಸಮಾಜದ ಪ್ರತಿನಿಧಿಯಂತೆ "ಲೇ ನಿಂಗೇನೆ ಇಲ್ಲಿ ಕೆಲ್ಸ, ಹೆಣ್ಣೆಂಗ್ಸಿಗ್ಯಾಕೆ ದುಡ್ನ ಪಂಚಾಯ್ತಿ, ಸುಮ್ನೆ ಅಲ್ಲಿ ಬಿದ್ಕಳೆ"[೧೧] ಎಂದು ತನ್ನದೇ ಜವಾಬ್ದಾರಿ ಎಂಬಂತೆ ಹೇಳುತ್ತಿದ್ದ, ವಾಸ್ತವಾಗಿ ರುಕ್ಮಿಣಿ ಸಮಾನತೆ ಬಯಸುವ ಹೆಣ್ಣಾಗಿ ಕಂಡುಬರುವುದೇ ಇಲ್ಲ. ಅವಳು ಗಂಡನೊಂದಿಗೆ ನಾಲ್ಕು ಮಾತನಾಡುವ, ಪ್ರೀತಿ ಬಯಸುವ ಹೆಣ್ಣಾಗಿದ್ದಳು. ನರಸಿಂಹ ಎಂದೂ ಹೆಂಡತಿಯನ್ನು ಪ್ರೀತಿಯ ದೃಷ್ಟಿಯಿಂದ ಕಾಣಲೇ ಇಲ್ಲ. ಹೆಂಡತಿ ಇರುವುದು ತನ್ನ ಸೇವೆಗೆ ಮಾತ್ರ ಎಂದು ತಿಳಿದು ಅವಳನ್ನು ಹೀಗಳೆಯುತ್ತಿದ್ದ. ಮಾಡಿದ್ದರಲ್ಲಿ ತಪ್ಪು ಕಂಡು ಸಿಡುಕುವುದೇ ಸಂಸಾರವಾಗಿತ್ತು ನರಸಿಂಹನಿಗೆ.

ವ್ಯಾಪಾರಕ್ಕೆಂದು ವಾರ ಪೂರ್ತಿ ಅಲೆದಾಡುತ್ತಿದ್ದ ನರಸಿಂಹ ತನ್ನ ತಮ್ಮ ಶಂಕರಾಚಾರಿಯ ಬಗ್ಗೆ ಜವಾಬ್ದಾರಿ ಮರೆತು ಹೋದ. ಶಂಕರ ಊರ ಹುಡುಗರ ಸಹವಾಸಕ್ಕೆ ಬಿದ್ದು ಕಳ್ಳತನದ ಹಾದಿ ಹಿಡಿದು, ಒಂದು ದಿನ ಸಿಕ್ಕಿಬಿದ್ದು ಊರವರೆಲ್ಲ ಇವನ ವಿರುದ್ಧವಾದರು. ಕತೆಯಲ್ಲಿ ಶಂಕರನು ಆಗದ್ದನ್ನು ಮಾಡುವ ಹಠದ ಪಾತ್ರ. ಇಲ್ಲದ ದುಶ್ಚಟಗಳನ್ನು ಕಲಿಯುವ ಶಂಕರ ಸಮಾಜಕ್ಕೆ ಮಾರಕವಾಗುತ್ತಾನೆ. ಮುಂದಿನ ಬದುಕಿನ ಅರಿವಿಲ್ಲದೆ ಷೋಕಿಗೆ ಬಿದ್ದು ಹಾಳಾಗುತ್ತಾನೆ. ಹೀಗಿ ಒಂದು ದಿನ ಆಸ್ತಿಯಲ್ಲಿ ಪಾಲು ಕೇಳಿ ಜಗಳವಾಡುವಾಗ ಒನಕೆ ಹಿಡಿದು ಸಾಯಿಸುವುದಾಗಿ ಕಿರುಚಾಡುತ್ತಾನೆ. ದುರದೃಷ್ಟವೆಂಬಂತೆ ಎಸೆದ ಒನಕೆ ತಲೆಗೆ ಬಿದ್ದು ರುಕ್ಮಿಣಿ ಸಾಯುತ್ತಾಳೆ.

ಹೆಂಡತಿಗಾಗಿ ಅವಸ್ಥೆಯಿಂದ ನರಸಿಂಹ ತನ್ನ ಪಶ್ಚಾತಾಪದಲ್ಲಿ ಬೇಯುತ್ತಾನೆ. ತಾನು ರುಕ್ಮಿಣಿಗೆ ಎಂದೂ ಸುಖ ನೀಡದವನಾದೆ ಎಂದು ರೋದಿಸುತ್ತಾನೆ. ತನ್ನ ಹೆಂಡತಿಯ ಶಾಂತ ಬದುಕು ತನ್ನ ಸಿಟ್ಟಿನ ಹೊಳೆಯಲ್ಲಿ ಕೊಚ್ಚಿ ಹೋಯಿತು ಎಂಬ ಅಪರಾಧ ಭಾವ ಅವನನ್ನು ಕಾಡತೊಡಗುತ್ತದೆ. ಎಲ್ಲರನ್ನೂ ಕಳೆದುಕೊಂಡ ನರಸಿಂಹ ಅನಾಥನಂತೆ ಸದಾ ಪೇಚಾಡುತ್ತಿದ್ದ. ಇಂತಹ ಎಷ್ಟೋ ಜೀವನಗಳು ಸಮಾಜದೊಳಗೆ ಇದ್ದು ನರಳುತ್ತಿವೆ.

ಕಾದಂಬರಿಯ ಪ್ರತಿಯೊಂದು ಸನ್ನಿವೇಶಗಳು ಸಮಾಜ ಮುಖಿಯಾದ ಧೋರಣೆಯನ್ನು ತಳೆಯುತ್ತವೆ. ಕಾದಂಬರಿ ಸಾಗಿದಂತೆಲ್ಲಾ ಹೀನ ನಡವಳಿಕೆಯನ್ನು ತಿದ್ದುವ ಪ್ರಯತ್ನ ಮಾಡುತ್ತದೆ. ಸಮಾಜಕ್ಕೆ, ಸಂಬಂಧಕ್ಕೆ ವ್ಯಕ್ತಿ ಸ್ಪಂದಿಸ ತೊಡಗಿದರೆ ನರಸಿಂಹನಂತಹ ಪರಿಸ್ಥಿತಿ ಬರುವುದಿಲ್ಲ. ಹಾಗಾಗಿ ಹನೂರರು ವ್ಯಕ್ತಿಯ ವಿವಿಧ ಮುಖಗಳನ್ನು ಶೋಧಿಸುವ ಕಡೆ ಹೆಚ್ಚು ಗಮನ ಕೊಟ್ಟಿದ್ದಾರೆ.

ಬಾಳಾಚಾರಿ ತನ್ನ ಮೊದಲ ಮಗಳನ್ನು ಕಳೆದುಕೊಂಡು ಎರಡನೇ ಮಗಳಾದರೂ ಸುಖವಾಗಿರಲೆಂದು ಉತ್ತಮವೆನಿಸಿದ ಸಂಗಣ್ಣನಿಗೆ ಕೊಟ್ಟು ಮದುವೆ ಮಾಡಿದ ಮೇಲೆ ತನ್ನ ಮನೆಯಲ್ಲೆ ಇರಿಸಿಕೊಂಡಿದ್ದ. ಆದರೆ ಸಂಗಣ್ಣ

ಉತ್ತಮನಾದರೂ ತನ್ನ ನಾಟಕ ಕಂಪನಿಯಲ್ಲಿ ರಾಣಾಬಾಯಿಯ ಹಿಡಿತಕ್ಕೆ ಸಿಕ್ಕಿ ಪಾರ್ವತಿಯನ್ನು ಬಿಡಲಾಗದೆ ಯೋಚಿಸತೊಡಗಿದ. ಆದರೆ ಆಸ್ತಿಯಿದ್ದ ಪಾರ್ವತಿಯನ್ನು ಬಿಡಲಾಗದು ಎಂದು ಯೋಚಿಸಿ ರಾಣಾಬಾಯಿಯನ್ನು ಮದುವೆಗೆ ಒಪ್ಪಿಸಲು ಪರದಾಡಿ, ಕೊನೆಗೆ ತನ್ನ ತಲೆಯಲ್ಲಿದ್ದ ವಿಚಾರವನ್ನೆಲ್ಲಾ ಬಿಡಿಸಿ ಹೇಳಿದ. "ಗಂಡು ಮಕ್ಕಳಿಲ್ಲದ ಆ ಬಾಳಾಚಾರಿಯ ಮಗಳನ್ನು ಲಗ್ನವಾದರೆ ಆಸ್ತಿ ಯಾರಿಗೆ ಸಿಗುವುದು? ಹೋಗಲಿ ಆ ಮುದುಕ ಆಚಾರಿ ಅವನ ಮುದುಕಿ ಇನ್ನೆಷ್ಟು ದಿನ ತಾನೇ ಬದುಕುವರು ? ಇದ್ದ ಇನ್ನೊಬ್ಬ ಮಗಳೂ ಲಗ್ನವಾದ ಎರೆಡು ವರ್ಷಕ್ಕೇ ಸತ್ತಳಂತೆ. ಅವಳಿಗೂ ಗಂಡು ಫಲವಿಲ್ಲ. ಜಾನಕಿ ಎಂಬ ಹೆಣ್ಣು ಪಿಳ್ಳೆಯೊಂದನ್ನು ಬಿಟ್ಟು ಸತ್ತಿದ್ದಾಳೆ. ಅದರದು ಯಾವ ಲೆಕ್ಕ? ಹೀಗಾಗಿ ಬಾಳಾಚಾರಿಯೂ ಅವನ ಕುಟುಂಬವೂ ಕಾಲವಾದ ಮೇಲೆ ಇಳಿಜಾರಿನಲ್ಲಿ ನೀರು ಹರಿದಂತೆ ಆಸ್ತಿ ಬರುವುದು ನನಗೇ"[೧] ಹೀಗೆ ಸಂಗಣ್ಣ ಎರೆಡು ದೋಣಿಯ ಮೇಲೆ ಕಾಲಿಟ್ಟು ಸುಖವಾಗಿರಬಹುದೆಂದು ಲೆಕ್ಕಾಚಾರ ಹಾಕಿದ. ನಾಟಕ ಕಂಪನಿಯಲ್ಲಿ ಕಡಿಮೆ ಸಂಬಳಕ್ಕೆ ದುಡಿದು ಸಾಕಾಗಿದ್ದ ಸಂಗಣ್ಣ ಬದುಕಿಗೊಂದು ನೆಲೆಕಂಡುಕೊಳ್ಳುವ ಪ್ರಯತ್ನಕ್ಕೆ ಕೈ ಹಾಕಿದ. ಆದರೆ ಸಂಗಣ್ಣ ಹೆಣ್ಣು, ಹೊನ್ನಿನ ಹಿಂದೆ ಬಿದ್ದು ಹಾಳಾದ. ಪಾರ್ವತಿಯನ್ನು ಮದುವೆಯಾಗಿ ಹೊಸ ಸಂಸಾರದ ಸುಖಕಂಡ ಸಂಗಣ್ಣ ತಿಂಗಳುಗಟ್ಟಲೇ ಕಾಲಕಳೆದ. ತನ್ನ ಅತ್ತೆಮಾವ, ಹೆಂಡತಿ ಜೊತೆ ಸೇರಿ ಮನೆಗೆ ಮಗನಾಗಬೇಕಾದ ಸಂಗಣ್ಣ ಆಸ್ತಿಯ ಗುಂಗಿನಲ್ಲೇ ಚಿಂತಿಸತೊಡಗಿದ.

ಆದರೆ ಸಂಗಣ್ಣ ತಾನೊಬ್ಬ ನಾಟಕದಲ್ಲಿ ಉತ್ತಮ ಪಾತ್ರಧಾರಿ. ನನ್ನ ಪ್ರತಿಭೆ ಕಂಡು ಈಗ ಸಿನಿಮಾದಲ್ಲೂ ಪಾರ್ಟು ಮಾಡಲು ಕರೆದಿದ್ದಾರೆ ಎಂದು ಊರ ಹೈದರ ತಲೆ ಕೆಡಿಸಿ ಹಣ ಕೀಳುತ್ತಾನೆ. ತನ್ನ ದುಶ್ಚಟಗಳಿಗೆ ಹಣ ಸರಾಗವಾದಾಗ ಸೋಮಾರಿತನ ಒಗ್ಗಿಬಿಡುತ್ತದೆ. ಒಂಟಿತನದಿಂದ ಬಾಲ್ಯದಿಂದಲೂ ನಾಟಕ ಕಂಪನಿ ಸೇರಿ ಕಷ್ಟದ ಅನುಭವವಿದ್ದರೂ ಇಂಥಾ ಎಷ್ಟೋ ಪಾತ್ರಗಳು ಹಾಳಾಗುವುದು ಸರ್ವೇಸಾಮಾನ್ಯ. ಹನೂರರು ಬಾಳಾಚಾರಿ ಮತ್ತು ಸಂಗಣ್ಣನ ಪಾತ್ರಗಳಲ್ಲಿ ವೈವಿಧ್ಯತೆ ತಂದಿದ್ದಾರೆ. ಇರುವುದೆಲ್ಲವನ್ನು ಬಿಟ್ಟು ಸ್ವಂತ ಬದುಕಬೇಕೆಂಬ ಛಲದಿಂದ ಹೊರಟ ಬಾಳಾಚಾರಿ ಹಸಿವು, ಸುಖ ದುಃಖಗಳನ್ನು ದಾಟಿ ಬದುಕುಕಟ್ಟಿಕೊಂಡ. ಆದರೆ ಏನೂ ಇಲ್ಲದೆ ಅನಾಥನಾಗಿ ನಾಟಕ ಕಂಪನಿ ಸೇರಿ ಕಷ್ಟ ಅನುಭವಕ್ಕೆ ಬಂದರೂ ದುಶ್ಚಟಗಳಾಗಿ ಪಲಾಯನವಾಗುವ ಸಂಗಣ್ಣನ ವ್ಯಕ್ತಿತ್ವಗಳಿಗೂ ವ್ಯತ್ಯಾಸಗಳಿವೆ. ಒಂದು ಗಂಡು ಯಶಸ್ವಿಯಾಗಬೇಕಾದರೆ ಹೆಣ್ಣಿನ ಬಲವೂ ಸೇರಬೇಕು. ಅಂತಹ ಅನ್ಯೋನ್ಯತಾ ಗುಣವಿರುವ ಪಾರ್ವತಿ, ರುಕ್ಮಿಣಿ, ರಾಣಾಬಾಯಿಯಂತಹ ಪಾತ್ರಗಳು ಮುಗ್ಧತೆಯಿಂದಲೋ, ಸಾಮಾಜಿಕ ಅರಿವಿಲ್ಲದೆಯೋ, ಬದುಕನ್ನು ಕಟ್ಟುವಲ್ಲಿ ಸೋಲುತ್ತವೆ.

ಬುಡಕಟ್ಟು ಸಂಸ್ಕೃತಿಯು ಇಂತಹ ಸಾಂಸಾರಿಕ ಜಂಜಾಟಗಳಿಂದಾಗಿಯೇ ಇನ್ನು ಸಹ ಮುಂದುವರೆಯದೆ ಅಧೋಗತಿಗಿಳಿಯುತ್ತಿವೆ. ಇಲ್ಲಿ ಸಂಗಣ್ಣ ಒಬ್ಬ

ಕಲೆಗಾರನಾಗಿ ಹೆಸರಾದರೂ ವೈಯಕ್ತಿಕ ಜೀವನದಲ್ಲಿ, ವೈಯಕ್ತಿಕ ನಡತೆಯಲ್ಲಿ ಸೋಲುತ್ತಾನೆ. ರಂಗಭೂಮಿಯ ಅಂದಿನ ಸ್ಥಿತಿಗತಿಗಳನ್ನು ಹನೂರರು ಸೂಕ್ಷ್ಮವಾಗಿ ವಿವರಿಸಿದ್ದಾರೆ. ಕಲೆಗಾರರ ಬದುಕು, ಕಂಪನಿ ಮಾಲೀಕರ ದುರ್ನಡತೆಗಳು, ಕಂಪನಿ ಪಾತ್ರಧಾರಿಗಳ ನಡುವೆ ವೈಮನಸ್ಸು ಇವೆಲ್ಲವನ್ನು ಹನೂರರು ವಿವರಿಸುತ್ತಾರೆ. ಇವರು ಕಾದಂಬರಿ ಬರೆಯುವ ಕಾಲಕ್ಕಾಗಲೇ ಸಿನಿಮಾ ಪ್ರಭಾವ ಬೀರಿದ್ದು, ನಾಟಕ ಪಾತ್ರಧಾರಿಗಳು ಸಿನಿಮಾದತ್ತ ವಾಲುವಿಕೆ ಕಂಡುಬರುತ್ತದೆ. ಹಾಗಾಗಿ ರಂಗಭೂಮಿಯು ತನ್ನ ಪ್ರಭಾವ ಕಳೆದುಕೊಳ್ಳಲು ಮೇಲಿನ ಎಲ್ಲವೂ ಕಾರಣಗಳೇ ಆಗಿವೆ. ಸಂಗಣ್ಣ ರಾಣಾಬಾಯಿ ಜೊತೆಗೆ ಕಾಲಕಳೆದಂತೆ ಪಾರ್ವತಿಯ ಕಡೆ ಯೋಚನೆ ಮಾಡದೆ ಹಗಲು ರಾತ್ರಿ ಕಳೆಯಗೊಡಗಿದ. ಹೀಗೆ ಕಳೆಯುತ್ತಿರಲು ಬಾಳಾಚಾರಿ ಅಳಿಯ ಬಾರದ್ದನ್ನು ತಿಳಿದು ತಾನೇ ಪಟ್ಟಣಕ್ಕೆ ಬಂದು ಅಳಿಯನಿಗೆ ಒಂದು ಮನೆ ಮಾಡಿ ಪಾರ್ವತಿಯನ್ನು ಬಿಟ್ಟು ಹೋದ. ಅಷ್ಟರಲ್ಲಿ ರಾಣಾಬಾಯಿಯಲ್ಲಿ ಸುಖ ಕಂಡಿದ್ದ ಸಂಗಣ್ಣ ಪಾರ್ವತಿಯನು ನಿಂದಿಸತೊಡಗಿದ. ದಿನಕಳೆದಂತೆ ಸಂಗಣ್ಣ ಇಬ್ಬರು ಹೆಂಡರ ನಡುವೆ ಸಿಕ್ಕಿ ಸುಣ್ಣವಾಗಿದ್ದ. ಬದುಕು ಒಂದು ಕಡೆಯೂ ಸರಿಹೋಗದ್ದರಿಂದ ಹಾಗೂ ಅಷ್ಟರಲ್ಲಿ ಇಬ್ಬರ ಸುಖವೂ ಸಾಕು ಎಂದು ಅನ್ನಿಸತೊಡಗಿ ಹೊಸದೊಂದು ಮದುವೆ ಯೋಚನೆಗೆ ಬಂದು ಇಬ್ಬರನ್ನು ಬಿಟ್ಟು ಓಡಿ ಹೋದ.

ಸಾಮಾಜಿಕ ವ್ಯವಸ್ಥೆಯೊಳಗೆ ಒಂದು ಗಂಡಿಗೆ ಒಂದು ಹೆಣ್ಣು ಎಂಬುದು ನಿಯಮಿತ. ಆದರೆ ಅದಕ್ಕಿಂತ ಹೆಚ್ಚಾದರೆ ವ್ಯವಸ್ಥೆಯ ದಾರಿ ದಿಕ್ಕು ತಪ್ಪುತ್ತದೆ. ಇಂತಹ ಜನಪದ ಸಂಸ್ಕೃತಿಯನ್ನು ಆಧರಿಸಿ ಹನೂರರು ಕಾದಂಬರಿ ರಚಿಸಿದ್ದಾರೆ. ಇಲ್ಲಿ ನಾಯಕ ಉಪನಾಯಕರ ಅನಾಗರೀಕತೆಯಲ್ಲಿ ಸಿಲುಕಿ ದಾರಿತಪ್ಪುವ, ಅತಂತ್ರ ಸ್ಥಿತಿಗೆ ತಲುಪುವ ಸ್ಥಿತಿಯನ್ನು ಶೋಧಿಸುವುದೇ ಕಾದಂಬರಿಕಾರರ ಮುಖ್ಯ ಉದ್ದೇಶ.

ಕಾದಂಬರಿಯ ಕೊನೆಯಲ್ಲಿ ಬಾಳಾಚಾರಿ ಸತ್ತುಹೋದರು ಅವನ ಮೊಮ್ಮಗಳು ಜಾನಕಿ ಮುಂದಿನ ತನ್ನ ಜೀವನದ ದಿನಗಳನ್ನು ಭರವಸೆಯಂತೆ ಕಾಯುವಲ್ಲಿ ಕಾದಂಬರಿ ಅಂತ್ಯಗೊಳ್ಳುತ್ತದೆ. ಹಿಂದಿನ ತನ್ನ ಮನೆಯವರಿಗಾದ ನೋವುಗಳ ಪರಿವಿಲ್ಲದೆ ತನ್ನ ಗಂಡನ ನೆನೆಯುವ ಜಾನಕಿ ಗಂಡನಾಗುವವನು ಬರುವಿಕೆಗಾಗಿ ಕಾಯುತ್ತಾಳೆ. ಕಾದಂಬರಿಕಾರರು ಮುಂದಿನ ಬದುಕೊಂದು ಕುಡಿಯೊಡೆದು ನಿಂತಿದೆ ಇಲ್ಲಾದರೂ ಉತ್ತಮ ಗೀಜಗನೇ ಬರಲಿ ಎಂದು ಬಯಸುವಂತೆ ಕಾಣುತ್ತದೆ.

'ಬಾರೊ ಗೀಜಗನೆ' ಕಾದಂಬರಿ ಶೀರ್ಷಿಕೆಯು ಬರುವ ಗೀಜಗ ಬದುಕ ಕಟ್ಟುವಂತಾದರೆ ಜಾನಕಿಯ ಬಾಳಾದರೂ ಹಸನಾಗುತ್ತದೆ ಎಂದು ಹೇಳುತ್ತದೆ. ಸಿರಿಯಜ್ಜಿ ಹಾಡುವ ಗುಣಸಾಗರಿ ಹಾಡು ಮೈನೆರೆದ ಜಾನಕಿಗೆ ನಾಚಿಕೆಯನ್ನುಂಟುಮಾಡುತ್ತದೆ. ಹಾಗಾಗಿ ಲೋಕದೊಳಗಿನ ಗಂಡುಹೆಣ್ಣು ಕೂಡಿದ ಮೇಲೆ ಕೂಡಿಬಾಳುವ ಜೀವನವೇ ಬದುಕು. ಹನೂರರು ಗಂಡ ಹೆಂಡತಿಯ

ವಿಯೋಗದ ಸಂದರ್ಭವನ್ನು ಒಂದು ಸಂಸಾರದ ತಲೆಮಾರಿನಲ್ಲಿ ತಂದು ಉತ್ತಮ ವಸ್ತುವನ್ನು, ಪಾತ್ರಗಳನ್ನು ಸನ್ನಿವೇಶಗಳನ್ನು ಸಮರ್ಥವಾಗಿ ಸೇರಿಸಿದ್ದಾರೆ.

ಭಾಷಾ ದೃಷ್ಟಿಯಿಂದ ಕಾದಂಬರಿಯು ತನ್ನ ಹೊಸತನ ಕಂಡುಕೊಂಡಿದೆ. ಅದು ಭಾಷೆಯ ಬಳಕೆ, ಹಾಗು ಉತ್ತಮ ನಿರೂಪಣೆಯಿಂದ ಕಾದಂಬರಿ ಸಾಗುತ್ತದೆ. ವಸ್ತುವು ಬುಡಕಟ್ಟು ಜೀವನ ಆಧಾರಿತವಾಗಿರುವುದರಿಂದ ಅವರಾಡುವ ನೇರ ಮಾತುಗಳೆ ವಾಕ್ಯಗಳಾಗುತ್ತವೆ. ಭಾಷೆಯಲ್ಲಿ ಸರಳತೆ ಇದ್ದರೂ ಸಂಧರ್ಭಕ್ಕೆ ತಕ್ಕಂತೆ ವ್ಯಂಗವೂ, ಹಾಸ್ಯವೂ, ಮೌನವೂ ಆಗಿ ಅಣಕಿಸುತ್ತದೆ, ನಗಿಸುತ್ತದೆ ಮತ್ತು ಆಳವಾದ ಯೋಚನೆಗೆ ತಳ್ಳುತ್ತದೆ. ಪ್ರಾದೇಶಿಕ ಭಾಷಾ ಬಳಕೆಯಲ್ಲಿ ಹೆಸರಾದ ದೇವನೂರು ಮಹದೇವ ರಂತೆಯೇ ಹನೂರರು ಕಾದಂಬರಿಯಲ್ಲಿ ಹಾಗೆ, ಒಗಟು, ಬೈಗುಳ, ಕಥೆ, ಬಯಲಾಟ ಎಲ್ಲದ ಪ್ರಯೋಗದಿಂದ ಜನಪದ ಭಾಷೆಯಲ್ಲಿ ಹಿಡಿತ ಸಾಧಿಸಿದ್ದಾರೆ.

ಹೀಗೆ 'ಬಾರೊ ಗೀಜಗನೇ' ಕಾದಂಬರಿಯು ಜೀವಪರ ಮೌಲ್ಯಗಳ ಪರವಾಗಿ ಅದರ ಹುಡುಕಾಟದಲ್ಲಿಯೇ ಎಲ್ಲಾ ಪಾತ್ರಗಳು, ಸನ್ನಿವೇಶಗಳು ಸಾಗುತ್ತವೆ. ಕಾದಂಬರಿಕಾರರ ಸಂವೇದನೆ ಭಾರತೀಯ ಸಂಸ್ಕೃತಿಯ ನೆಲೆಯಿಂದ ದೂರವಾಗಿಲ್ಲ. ಕಾದಂಬರಿಯಲ್ಲಿಯ ಎಲ್ಲಾ ಪಾತ್ರಗಳೂ ಸಹ ತಮ್ಮ ತಮ್ಮ ವೈಯಕ್ತಿಕ ಅಸ್ತಿತ್ವದ ಹುಡುಕಾಟವನ್ನೆ ನಿರ್ವಹಿಸುವುದರ ಜೊತೆಯಲ್ಲಿಯೇ ಕಾದಂಬರಿಯು ಸಾಗುತ್ತದೆ. ವೈಚಾರಿಕತೆಯ ಮೂಲ ನೆಲೆ ಸ್ತ್ರೀಯಾಗಿರುವುದರಿಂದ ಎರೆಡೂ ಕಾದಂಬರಿಗಳಲ್ಲೂ ಅವಳ ಬದುಕಿನ ತಳಹದಿಯ ಮೇಲೆ ಕತೆಯು ಮುಂದುವರೆಯುತ್ತದೆ. ಕತ್ತಲೆಯಲ್ಲಿ ಸನ್ನಿವೇಶಗಳು ವರ್ತಮಾನದಲ್ಲೆ ಸಾಗಿದರೂ ಭೂತಕಾಲದ ನಂಟಿನೊಡನೆ ಬೆಸೆದುಕೊಂಡು ನಿರೂಪಣಾ ತಂತ್ರ ನವೀನತೆಯನ್ನು ಪಡೆದುಕೊಂಡಿದೆ. ಪ್ರತಿಯೊಂದು ವಿಭಾಗದಲ್ಲೂ ಘಟನೆಗಳು ಹಿಂದಕ್ಕೆ ಹೋಗಿ ಮುಂದಕ್ಕೆ ಬರುತ್ತದೆ. ಪ್ರತಿಯೊಂದು ಉಪಕಥೆಗಳಿಗೂ ಅಂತ್ಯವಿಲ್ಲ. ನಿರ್ಧಿಷ್ಟ ಅಂತ್ಯ ಮುಖ್ಯವಲ್ಲ, ಆದರೂ ಘಟನೆಯ ವಿವರ ತಿಳಿಸಿ ಕಾದಂಬರಿ ಮುಂದಿನ ಘಟನೆಗೆ ಸಾಗುತ್ತದೆ. ರಾಚಮ್ಮನ ಬದುಕು, ಸಂಗಣ್ಣ, ನರಸಿಂಹ ಹಾಗೂ ಪಾರ್ವತಿಯರ ಬದುಕು ಮುಂದಿನ ಚಿತ್ರಣದ ವಿವರವನ್ನು ಓದುಗನ ಆತ್ಮವಿಮರ್ಶೆಗೆ ಬಿಟ್ಟಿದ್ದಾರೆ.

ಹೀಗೆ ಕಾದಂಬರಿಯಲ್ಲಿ ಬರುವ ಎಲ್ಲಾ ಪಾತ್ರಗಳು ಒಂದೊಂದು ಮುಖವಾಡ ಹೊತ್ತು ಬದುಕಿನ ಭಾಗವಾಗಿ ತೋರುತ್ತವೆ. ಪೂರ್ತಿ ಜನಪದ ಬದುಕನ್ನೇ ಹೇಳಿದರೂ ಒಟ್ಟು ನೋಟದಿಂದ ಎಲ್ಲರ ಬದುಕನ್ನು ಪ್ರತಿನಿಧಿಸುತ್ತದೆ. ಸಮಾಜದಲ್ಲಿ ಕಂಡುಬರುವ ಲೈಂಗಿಕ ಆಸೆ, ಪಲಾಯನವಾದ, ಶೋಷಣೆ, ಅಸಮಾನತೆ, ಜಾತೀಯತೆ ಮತ್ತು ಬದಲಾಗುತ್ತಿರುವ ಸಂಸ್ಕೃತಿಯನ್ನು ಕಾದಂಬರಿಯು ತನ್ನೊಳಗೆ ಗರ್ಭೀಕರಿಸಿಕೊಂಡಂತಿದೆ. ಅದರ ಜೊತೆಯಲ್ಲಿಯೇ ಪ್ರತಿಯೊಂದು ಸಮಸ್ಯೆಗೆ ಪರಿಹಾರ ರೂಪವನ್ನು ನೀಡುತ್ತದೆ.

**ನಿಕ್ಷೇಪ :-**

ಕೃಷ್ಣಮೂರ್ತಿ ಹನೂರು ಅವರು ೧೯೯೪ಳ ರಲ್ಲಿ ಬರೆದ 'ನಿಕ್ಷೇಪ' ಕಾದಂಬರಿ ಎರಡು ವಿಭಿನ್ನ ಸಂಸ್ಕೃತಿಗಳನ್ನು ಎದುರು ಬದುರಾಗಿಸಿ ಹೆಣೆದಿರುವ ಕಾದಂಬರಿಯಾಗಿದೆ. ಹನೂರರು ಕಾದಂಬರಿ ಬರೆಯುವ ಕಾಲಕ್ಕೆ ಕನ್ನಡ ಕಾದಂಬರಿ ಸಾಹಿತ್ಯ ಒಂದು ಮಟ್ಟಕ್ಕೆ ಸಮೃದ್ಧವಾಗಿತ್ತು. ನವೋದಯ, ನವ್ಯ, ಪ್ರಗತಿಶೀಲ, ದಲಿತ-ಬುಡಾಯದ ಪಂಥಗಳು ತಮ್ಮ ಪ್ರಭಾವ ಕಳೆದುಕೊಂಡು ಎಲ್ಲ ಪಂಥಗಳಲ್ಲೂ ಉತ್ತಮವಾದದ್ದನ್ನು ಸಾಹಿತ್ಯದಲ್ಲಿ ಅಳವಡಿಸಿಕೊಂಡು ಬರವಣಿಗೆ ಆರಂಭವಾದ ಕಾಲ. ಹನೂರರ ಕಾಲ ಐದು ವರ್ಷಗಳ ಕಾಲ ಮದರಾಸಿನಲ್ಲಿದ್ದ ಇವರು ಅಲ್ಲಿಯ ಭೂ ಪ್ರದೇಶ, ಪಾತ್ರಗಳನ್ನು ಕಾದಂಬರಿಗೆ ಹಿನ್ನೆಲೆಯಾಗಿ ಬರೆದದ್ದು ವಿಶೇಷ. ಒಬ್ಬ ನಿಜವಾದ ಜಾನಪದ ವಿದ್ವಾಂಸ ತನ್ನ ಕ್ಷೇತ್ರಕಾರ್ಯದ ಅನುಭವಗಳನ್ನು ಸೃಜನಶೀಲತೆಗೆ ಅಳವಡಿಸಿಕೊಂಡ ಕಾದಂಬರಿಯಾಗಿದೆ.

ಈ ಕಾದಂಬರಿಯಲ್ಲಿ ಹನೂರರು ಪಟ್ಟಣ ಸಂಸ್ಕೃತಿ, ಬುಡಕಟ್ಟು ಸಂಸ್ಕೃತಿ ಹಾಗೂ ಪಾಶ್ಚಾತ್ಯ ಸಂಸ್ಕೃತಿಗಳ ತ್ರಿಕೋನ ಕಥಾ ಹಂದರಗಳನ್ನು ಅನಾವರಣಗೊಳಿಸಿದ್ದಾರೆ. ಅತಿಯಾಸೆಯ ಮಾರಕರೂಪ ಕಾದಂಬರಿಯಲ್ಲಿ ಕಂಡುಬರುತ್ತದೆ. ಮದರಾಸಿನ ಅತೀ ಶ್ರೀಮಂತರಾದ ಚಿದಂಬರಂ ಪಿಳ್ಳೆ ನೀಲಗಿರಿ ಬುಡಕಟ್ಟಿನ ಪೂವನಿಯನ್ನು ಬಯಸಿದ ಹಾಗೆ, ಪೂವನಿ, ಪಿಳ್ಳೆಯವರನ್ನು ಬಯಸಿದ ಹಾಗೆ, ಶ್ರೀವಳ್ಳಿ ವಿದೇಶಿ ವರನನ್ನು ಆಸೆಪಟ್ಟ ಹಾಗೆ ಈ ಪ್ರಕ್ರಿಯೆಗಳು 'ಹೆತ್ತವರಿಗೆ ಹೆಗ್ಗಣ ಮುದ್ದು' ಎಂಬ ಗಾದೆಗೆ ತದ್ವಿರುದ್ಧ ನಡವಳಿಕೆಯನ್ನು ಹೊಂದಿವೆ, ನಮ್ಮ ಜೀವನ ರೀತಿಗಿಂತ ಮತ್ತೊಂದು ಜೀವನದ ರೀತಿ-ನೀತಿಗಳಿಗೆ ಕೈ ಒಡ್ಡಿ ಕೈ ಸುಟ್ಟುಕೊಳ್ಳುವುದನ್ನು ಇಲ್ಲಿ ಕಾಣುತ್ತದೆ.

ಐವತ್ತರ ಪ್ರಾಯದ ಚಿದಂಬರಂ ಪಿಳ್ಳೆ ನಿಕ್ಷೇಪ ಕಾದಂಬರಿಯ ಕಥಾನಾಯಕ, ಮದರಾಸಿನ ಖೊಟ್ಟಿವಾಕಂ ಎಂಬ ಮೊಹಲ್ಲಾದ ನಿವಾಸಿ, ಕನ್ನಿಗಿಯಮ್ಮಾಳ್ ಇವರ ಹೆಂಡತಿ; ಮಗ ಕಲ್ಯಾಣ ಸುಂದರಂ ಇವರ ಇಪ್ಪತ್ತೈದು ವರ್ಷದ ಮಗ, ಮಾನವ ಶಾಸ್ತ್ರದಲ್ಲಿ ಎಂ.ಎ. ಪಡೆದು ಅಮೇರಿಕಾದ ನ್ಯೂಜೆರ್ಸಿಯಲ್ಲಿ ಉನ್ನತ ಶಿಕ್ಷಣ ಪಡೆದು ವ್ಯಾಸಂಗ ಮುಗಿಸಿ ಬಳಿಕ ಅಲ್ಲಿಯೇ ಉಪನ್ಯಾಸಕನಾಗಿ ಅಮೇರಿಕಾ ನಿವಾಸಿಯಾಗಿ ನೆಲೆಸಿದ್ದಾನೆ. ಮಗಳು ಕನಕವಲ್ಲಿ ಇಪ್ಪತ್ತು ವರ್ಷದ ಪ್ರಾಯದ ಈಕೆಗೆ ಬಲಗಾಲು ಮತ್ತು ಬಲಗೈ ಸ್ವಾಧೀನವಿಲ್ಲದ ಅಂಗವಿಕಲೆ. ಇದು ಒಂದು ಸಂಸಾರ. ಹನೂರು ಈ ಸಂಸಾರದೊಳಗಿನ ಶ್ರೀಮಂತಿಕೆಯನ್ನು, ಅವರ ಜಿವನದ ಕೊರತೆಯನ್ನು ಹಂತಹಂತವಾಗಿ ಚಿತ್ರಿಸಿದ್ದಾರೆ. ಪಿಳ್ಳೆಯವರನ್ನು 'ಅಯ್ಯ' ಎಂದು ಸಂಭೋಧಿಸಿ ಕರೆಯುವ ರೀತಿ ಒಂದು ಶ್ರೀಮಂತಿಕೆಯ ದರ್ಪದ ಸಂಕೇತವಾಗಿ ಕಾಣುತ್ತದೆ. ಅಯ್ಯ ಅವರಿಗೆ ಸೇರಿದ ಕನಕವಲ್ಲಿ ಕಂಬೈನ್ಸ ಚಿತ್ರಹಂಚಿಕಾ ಸಂಸ್ಥೆ, ಕನಕವಲ್ಲಿ ಡಿಸ್ಟಲರೀಸ್, ಕನಕವಲ್ಲಿ ಕಂಬೈನ್ಸ, ಮಾಯಮ್ ಗುಡಿ ಗ್ರಾಮಕ್ಕೆ ಸೇರಿದಂತಿರುವ ಹದಿನೇಳು ಎಕರೆ ತೋಟ, ಶ್ರೀಮಂತಿಕೆಯ ಸಂಕೇತವಾದ ಒಂದು ದೊಡ್ಡ ಬಂಗಲೆ, ಕಾರು ಉಳ್ಳಂತಹ

ಅಯ್ಯ ಅವರು ತಮಿಳು ಭಾಷೆಯ, ಸಾಹಿತ್ಯದ ಬಗ್ಗೆ ಆಸಕ್ತಿಯುಳ್ಳಂತಹ ಅಪರೂಪದ ವ್ಯಕ್ತಿ. ತುಂಬಾ ವಿಚಾರವಾದಿಯಾದ ಅಯ್ಯಾ ಅವರು ದೇವರ ಮೇಲೆ ಅಷ್ಟೇನು ನಂಬಿಕೆ ಇಡದವರು, ಅದ್ದರಿಂದಲೇ ಮನೆಯ ಹೆಸರು 'ಜ್ಞಾನವಿಲ್ಲಾ' ಎಂದು ಇಟ್ಟು ಪಿಳ್ಳೆಯಾದರ ಹೆಸರಿಡದೆ ಮೂರ್ತಿ ಇಡಲಷ್ಟೇ ಅವಕಾಶ ಮಾಡಿಕೊಟ್ಟದ್ದು.

ಕಾದಂಬರಿಯು ಸಮಾಜದಲ್ಲಿ ಒಪ್ಪಿತವಲ್ಲದ ಅನೈತಿಕತೆಯನ್ನು ಒಪ್ಪಿತ ಸಮಾಜದ ಭಾಗವಾಗಿ, ಅಂದರೆ ಸತ್ಯದ ಜೊತೆಗೆ ಸುಳ್ಳು ಅಂಟಿಕೊಂಡಿರುವಂತೆ ನೈತಿಕ ಮೌಲ್ಯಗಳೊಡನೆ ಅನೈತಿಕ ಅಂಶಗಳು ಬೆಂಬಿಡದೆ ಈ ಸಮಾಜದೊಳಗೆ ಸಾಗುತ್ತಿವೆ. ಚಿದಂಬರ ಪಿಳ್ಳೆ ಎಂಬ ಶ್ರೀಮಂತನೊಬ್ಬನ ಸುತ್ತಲೂ ನಡೆಯುವ ಕಥೆ ಅವನ ಬದುಕಿನ ಹಲವು ಮುಖಗಳನ್ನು, ತೋರಿಸುವ ದಿಸೆಯಲ್ಲಿ ಅವನ ಸಂಸಾರ, ನಾನಾ ವ್ಯವಹಾರಗಳು, ಆಗುವುದೆಲ್ಲವೂ ಪಿಳ್ಳೆಯಾರರ ಅನುಗ್ರಹದಿಂದಲೆ ಎಂಬ ದೈವ ಭಕ್ತಿಯ ಹೆಂಡತಿ, ಸಂಬಂಧಗಳಿಗೆ ಅಂಟಿಕೊಳ್ಳದ ಮಗ, ಅಸಹಾಯಕಳಾದ ಮಗಳು, ಹಲವು ನೆನಪುಗಳನ್ನು ಮೆಲುಕು ಹಾಕಲು ಕುಡಿಯಲು, ಸಹಪಾಠಿಗಳು, ಸಿನಿಮಾ ಬಿಡುಗಡೆಯಾದಾಗ ನಕ್ಷತ್ರಗಳನ್ನು ಹೊತ್ತುಕೊಂಡು, ಅವುಗಳನ್ನು ಕಾವಲು ಕಾಯುವ ಪುಂಡರರ ಬಳಗ, ತೋಟದ ಕಾವಲಿಗೆ ವೇಲ ದಂಪತಿಗಳು ನಿತ್ಯ ಬದುಕಿಗೆ ಅವಶ್ಯಕರಾದ ಕುಪ್ಪ ದಂಪತಿಗಳು, ಹೇಳಿದ್ದನ್ನು ಮಾಡಲು ಡ್ರೈವರ್ ಪಳನಿ, ಹೀಗೆ ಇವರೆಲ್ಲರ ಅವಶ್ಯಕತೆ ಮತ್ತು ಅಸಹಾಯಕತೆಗಳೇ ಕಾದಂಬರಿಯಲ್ಲಿ ನಮಗೆ ಕಾಣಸಿಗುವುದು.

ಅಯ್ಯಾ ಅವರ ಸೇವೆಯೇ ನಮ್ಮ ಪರಮಗುರಿ ಎಂದು ನಂಬಿದ್ದ ವೇಲ, ತನ್ನ ಪತ್ನಿ ಪೂವನಿ ಇಬ್ಬರು ಸಹ ನಿಷ್ಠೆಯಿಂದ ಕೆಲಸ ನಿರ್ವಯಿಸುತ್ತಾರೆ. ಆದರೆ ಮುಗ್ದತೆ, ಅಭಿಮಾನ, ನಿಷ್ಠೆ, ಭಕ್ತಿ ತೋರಿದ ಆ ಕಾಡು ಸುಂದರಿಯ ದೇಹವನ್ನು ಬಯಸಿ ತನ್ನದಾಗಿಸಿಕೊಳ್ಳುವ ಅಯ್ಯ
ವೇಲನ ಬದುಕನ್ನು ಸುಡುತ್ತಾನೆ. "ಪೂವನಿಯನ್ನು ಎಬ್ಬಿಸಿ ಅವಳ ಮನೆಗೆ ಕಳಿಸಿಬಿಡುವ ತವಕವನ್ನು ಪಿಳ್ಳೆಯವರು ವ್ಯಕ್ತಪಡಿಸಿದರಾದರೂ ಪೂವನಿಗೆ ಎದ್ದು ಹೋಗುವ ಆತುರವೇನು ಇರಲಿಲ್ಲ. ತಾನು ಸರ್ವರೀತಿಯಲ್ಲೂ ಅಯ್ಯಾ ಅವರಿಗೆ ಬೇಕಾದವಳೇನೋ ಈಗ ಎದ್ದು ಹೋದರೆ ಬೇಸರ ಮಾಡಿಕೊಳ್ಳುತ್ತಾರೆ"[೧೩] ಎಂದು ತಿಳಿದ ಪೂವನಿಗೆ ಅಯ್ಯ ನಡುವಿನ ಸಂಬಂಧ ನಿಷ್ಕಳಂಕವಾಗಿ ಕಂಡರೆ, ಅದು ಅಯ್ಯ ಅವರಿಗೆ ಒಂದು ದೈಹಿಕ ಕಾಮನೆಯ ಕೀಳು ಆಸೆಯಾಗಿ ಕಂಡುಬರುತ್ತದೆ. ತಾನು ಅಯ್ಯಾ ಅವರ ಜೊತೆ ಇರುವುದು ತನ್ನ ಸೇವೆಯ ಒಂದು ಭಾಗ ಎಂದು ತಿಳಿದದ್ದು ನಾಗರೀಕ ಸಮಾಜದ ಅರಿವಿಲ್ಲದೇ ಇರುವ, ತಾನು ತನ್ನ ಗಂಡನಿಗೆ ಸೇರಿದವಳು, ಅವನಿಗೆ ದ್ರೋಹವೆಸಗಿದಂತಾಯ್ತು ಎಂಬ ದಾಂಪತ್ಯದ ಕಟ್ಟುಪಾಡನ್ನು ತಿಳಿಯದ ಅರೆ ಬರೆ ಬೆಂದ ಹೆಣ್ಣು ಈ ಪೂವನಿ. ಸ್ವಸ್ತ ಸಮಾಜದಲ್ಲಿ ದುಡಿಯುವ, ದುಡುಸಿಕೊಳ್ಳುವ ಎರೆಡು ವರ್ಗಗಳಿವೆ. ಇಲ್ಲಿ ಗಂಡು ಹೆಣ್ಣಿನ ಸಂಭಂಧ ದೈಹಿಕ ಆಸೆಯೊಂದನ್ನು ಬಿಟ್ಟು ಉಳಿದಂತೆ ಎಲ್ಲಾ ಶ್ರಮವು ಸಮಾಜ ಒಪ್ಪುವಂತಹದ್ದು, ಆದರೆ ಇವುಗಳ ಜೊತೆ

ದೈಹಿಕ ಕೀಳು ಆಸೆ ಅನ್ಯ ಹೆಣ್ಣಿನ ಮೇಲುಂಟಾದರೆ ಅದು ಅನೈತಿಕ ಸಂಭಂದಕ್ಕೆ ದಾರಿ ಮಾಡಿಕೊಡುತ್ತದೆ ಎಂಬುದು ಹನೂರರ ಚಿಂತನೆಯಾಗಿದೆ. ಒಂದು ಹೆಣ್ಣು ಕೌಟುಂಬಿಕ ಜೀವನದಲ್ಲಿ ಮತ್ತು ಸಮಾಜದ ವ್ಯವಸ್ಥೆಯಲ್ಲಿ ಬದಲಾವಣೆಯ ಶಕ್ತಿಯಾಗಿದ್ದಾಳೆ. ವಿಕಾಸಕ್ಕೆ ಕಾರಣಳಾಗುತ್ತಾಳೆ.

ಅವಳ ಒಂದೊಂದು ಹೆಜ್ಜೆಯೂ ಬದಲಾವಣೆಯನ್ನು ತರುತ್ತದೆ. ಇಲ್ಲಿ ಕನ್ನಗಿಯಮ್ಮಾಳ್ ಕೇವಲ ಅನುಮಾನದ ಹಿಂದೆ ಸಾಗಿ ಗಂಡನ ಮನಸ್ಥಿತಿ ಅರಿಯದ ಹೆಣ್ಣಾಗಿದ್ದಾಳೆ. ಸಮಾಜದ, ಸಂಬಂಧಗಳ ಅರಿವಿಲ್ಲ, ಜನರೊಡನೆ ಅದರಲ್ಲೂ ತನಗಿಂತ ಹಣ, ಅಂತಸ್ತಿನಲ್ಲಿ ಕೆಳಮಟ್ಟದವರೊಡನೆ ಸಂಪರ್ಕವಿಲ್ಲದೆ ಒಂಟಿತನ ಬದುಕು ಸಪ್ಪೆ ಎನಿಸುತ್ತದೆ. ಹನೂರರು ತಾವಿದ್ದ ಪರಿಸರದ ಜನರ ಬೇರು ಕಳೆದುಕೊಂಡು, ಸ್ವಂತ ಅಸ್ತಿತ್ವದ ಸಲುವಾಗಿ, ಸ್ವಸಂರಕ್ಷಣೆಯ ಸಲುವಾಗಿ ತಮ್ಮ ಆತ್ಮಗೌರವವನ್ನು ಕಾಪಾಡಿಕೊಳ್ಳುಬೇಕೆಂಬ ಪಟ್ಟಣದ ನಿವಾಸಿಗಳ ಬದುಕು, ಯಾವುದೇ ನೀರೀಕ್ಷೆಗಳಲ್ಲದೆ, ಆರ್ಥಿಕ ಮುಗ್ಗಟ್ಟಿದ್ದರೂ ದೂಡ್ಡ ದೂಡ್ಡ ಕನಸುಗಳನ್ನು ಕಾಣುತ್ತಾ ಜೀವನದ ಪ್ರತೀ ಹಂತದ ನಿಜ ಅನುಭವದೊಡನೆ ಬದುಕಿನ ಸೂಕ್ಷ್ಮಗಳ ಅರಿವಿನೊಡನೆ ಸಾಗುವ ಬಡ ಜನರೂ, ಮುಂದುವರಿದ ಸಮಾಜದ ಸೋಂಕಿಲ್ಲದೆ ಇದ್ದ ಬುಡಕಟ್ಟು, ಕಾಡುವಾಸಿಗಳ ಮುಗ್ಧತೆಯ ನಿಷ್ಠಾವಂತ ಬದುಕು, ಎಲ್ಲವನ್ನೂ ಹನೂರರು ತೆರೆದ ಕಣ್ಣಿಂದ ನೋಡಿ ಕಾದಂಬರಿಯಾಗಿಸಿದ್ದಾರೆ.

ಈ ಕಾದಂಬರಿಯ ಮುಖ್ಯ ಪಾತ್ರವೆನಿಸುವ ಚಿದಂಬರ ಪಿಳ್ಳೆಯವರು ತಮ್ಮ ನಡವಳಿಕೆಯಲ್ಲಿ ಎಲ್ಲೂ ಅನುಮಾನ ಬಾರದಂತೆ ನಡೆದುಕೊಳ್ಳುವುದು ತನ್ನೊಳಗೆ ಅಪರಾಧಿ ಭಾವ ಹೊಂದಿ ಯಾವ ಕೆಲಸವನ್ನು ಮಾಡಲು ಆಸಕ್ತಿ ಹೊಂದದೆ ಕೊರಗುವ ಅಯ್ಯಾ, ತನ್ನೆಲ್ಲಾ ನೋವಿಗೆ ಪೂವನಿಯೇ ಕಾರಣವೆಂದು ಅತ್ತ ತಿರುಗಿಯೂ ನೋಡದೆ ಮಡಿವಂತಿಕೆಯನ್ನು ಪ್ರದರ್ಶಿಸುತ್ತಾರೆ, ಯಾರಿಗೂ ತಿಳಿಯಬಾರದು ಎಂದು ವೇಲನನ್ನು ಕೊಲೆ ಮಾಡಿಸುವುದು ಭೂತಕಾಲದಲ್ಲಾದ ನಡವಳಿಕೆಯನ್ನು ಮರೆಮಾಡುವುದೇ ಆಗಿದೆ. ಹನೂರರು ಈ ಹೊಯ್ದಾಟದ ಸುತ್ತಲೇ ಕಾದಂಬರಿಯನ್ನು ಹೆಣೆದಿದ್ದಾರೆ.

ಈ ಕಾದಂಬರಿಯಲ್ಲಿ ನವ್ಯರ ಹಾಗೆ ಪಟ್ಟಣದ ಅಸ್ತವ್ಯಸ್ತ ಬದುಕನ್ನು ವಿಶ್ಲೇಷಣೆ ಮಾಡುವುದಾಗಲಿ, ದಲಿತ-ಬಂಡಾಯದವರ ಹಾಗೆ ಪ್ರತಿಭಟನೆಯಾಗಲೀ ಎಲ್ಲೂ ಕಂಡುಬರುವುದಿಲ್ಲ. ಇದನ್ನು ಹೊರತು ಪಡಿಸಿಯೂ ಕಾದಂಬರಿ ಮುಕ್ತವಾಗಿಲ್ಲ. ಪ್ರತಿಯೊಂದು ಪಾತ್ರ, ಸನ್ನಿವೇಶಗಳು ಶಾಂತವಾಗಿಯೆ ಸಾಗುತ್ತಾವೆ. ಆದ್ದರಿಂದ ಪಟ್ಟಣದ ಹೊಸ ನಾಗರೀಕತೆ, ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ ಜನ ವರ್ತಿಸುವ ರೀತಿಯನ್ನು ಹನೂರರು ವಾಸ್ತವದ ನೆಲಗಟ್ಟಿನಲ್ಲಿ ಚರ್ಚಿಸಿದ್ದಾರೆ.

ನಿಕ್ಷೇಪ ಕಾದಂಬರಿಯಲ್ಲಿ ಬರುವ ಸ್ತ್ರೀ ಪಾತ್ರಗಳಲ್ಲಿ ಹಲವು ವೈವಿಧ್ಯತೆಗಳನ್ನು, ಹಾಗೂ ಕೌಟುಂಬಿಕ ಜೀವನದ ಮೇಲೆ ಬೀರುವ ಪರಿಣಾಮಗಳನ್ನು ಸೂಕ್ಷ್ಮವಾಗಿ ಹೇಳಿದ್ದಾರೆ. ಕನ್ನಗಿಯಮ್ಮಾಳ್, ಪೂವನಿ, ಕುರುಪ್ಪಮ್ಮ, ಕನಕವಲ್ಲಿ, ಮಾಧವಿ, ಶ್ರೀವಳ್ಳಿ

ಈ ಎಲ್ಲಾ ಸ್ತ್ರೀಪಾತ್ರಗಳ ಅಯ್ಯ ಕುಟುಂಬದ ಸುತ್ತಲೂ ಸುತ್ತುತ್ತಲೇ ಜೀವನಾನುಭವವನ್ನೆ ಸಾರುತ್ತದೆ. ಮಾನಕ್ಕೆ ಹೆದುರುವ ಸ್ತ್ರೀಪಾತ್ರಗಳೇ ಹೆಚ್ಚಿದ್ದು ಅದನ್ನೆ ಬಂಡವಾಳವಾಗಿಸಿಕೊಂಡದ್ದು ಮಾಧವಿ ಪಾತ್ರ. ಕನ್ನಗಿಯಮ್ಮಾಳ್ ತನ್ನ ಮಗನೊಡನೆ ಮಾಧವಿ ಸಂಬಂಧ ಹೊಂದಿದ್ದಾಳೆಂದು ಅನುಮಾನಿಸುವ ರೀತಿಯನ್ನು ಮಾಧವಿ ಪೋಲಿಸರೊಡನೆ ಹೇಳಿ ಕಳ್ಳತನದ ಆರೋಪದಿಂದ ಮುಕ್ತವಾಗುತ್ತಾಳೆ. ಬಡತನದಿಂದ ಬಂದರೂ ಮಾಧವಿಗೆ ಸಿರಿತನದ ಬದುಕು ಬಯಸುತ್ತಾಳೆ. ಆದರೆ ಪೂವನಿ ಬಡತನದ ಅರಿವೇ ಇಲ್ಲದೆ, ಶ್ರೀಮಂತಿಕೆಯ ಅರಿವೂ ಇಲ್ಲದೆ ತನ್ನ ಹಾಗೂ ಅಯ್ಯ ಸಂಬಂಧವನ್ನು ಸಾಯುವ ಕ್ಷಣದವರೆಗೂ ಯಾರಿಗೂ ಹೇಳುವುದೇ ಇಲ್ಲ. ಕೊನೆಗೆ 'ಇದು ಅಯ್ಯಾ ಅವರ ಮಗು' ಎಂದು ಹೇಳುವ ಪೂವನಿ, ಪರಿಸ್ಥಿತಿಯ ಲಾಭ ಪಡೆಯಲಿಲ್ಲ, ಆದರೆ ಮಾಧವಿ ನಪುಂಸಕನಾದ ಕಲ್ಯಾಣ ಸುಂದರಂ ಜೊತೆ ಮಾತಾಡದಿದ್ದರೂ ಸಂಬಂಧವಿದೆ ಎಂದು ಹೇಳಿ ಬಚಾವಾಗುತ್ತಾಳೆ. ಇಂತಹ ದ್ವಿಮುಖ ಪಾತ್ರಗಳಲ್ಲಿ ಹನೂರರು ಸ್ತ್ರೀಪಾತ್ರದ ವೈರುಧ್ಯಗಳನ್ನು ಸಮರ್ಥವಾಗಿ ಚಿತ್ರಿಸಿದ್ದಾರೆ.

ಪೂವನಿಗೆ ಅಯ್ಯಾ ಅವರನ್ನು ಕಂಡರೆ ಇದದ್ದು ಭಕ್ತಿ, "ಅಯ್ಯ ಅವರಿಗೆ ಊಟ ಸೇರಿತೋ ಇಲ್ಲವೊ, ತನ್ನ ಅಪ್ಪ ಪೋಡಿನಲ್ಲಿ ಊಟಮಾಡುತ್ತಿದ್ದ ಹಾಗೆ ಅಯ್ಯ ಊಟ ಮಾಡಿದಂತೆ ತೋರಲಿಲ್ಲ"[೧೪] ಎಂಬುದು ಪೂವನ ತನ್ನ ತಂದೆ ಸ್ಥಾನದಲ್ಲಿ ಅಯ್ಯ ಅವರನ್ನು ಕಂಡದ್ದು ಶ್ರೇಷ್ಠತೆ. ಅದೇ ಅಯ್ಯಾ ತನ್ನ ಮಗಳಿಗಿಂತ ಚಿಕ್ಕವಳಾದ ಪೂವನಿಯನ್ನು ಕಂಡದ್ದು ಲೈಂಗಿಕತೆಯ ಕೀಳು ದೃಷ್ಟಿಯಿಂದ, ಇದೂ ಹನೂರರು ಹೇಳ ಹೋರಟ ಸೂಕ್ಷ್ಮತೆ.

ಸಮಾಜದಲ್ಲಿ ಪ್ರತಿಷ್ಠೆಯಿಂದ ಹೆಸರು ಮಾಡಿದ 'ಅಯ್ಯ' ಪಾತ್ರವು ತಾ ಮಾಡಿದ ಒಂದೇ ತಪ್ಪಿನಿಂದ ಅದರಲ್ಲೂ ಆ ತಪ್ಪಿನ ಹಿಂದೂ ಮುಂದೂ ಅರಿಯದೆ ಸದಾ ಆತಂಕದಲ್ಲೆ ಇರುವ ಹಾಗೆ ಹನೂರರು ಚಿತ್ರಿಸಿದ್ದಾರೆ. ಘನತೆ, ಪ್ರತಿಷ್ಠೆ, ಮಾನಕ್ಕೆ ಹೆದರಿದ ಮನುಷ್ಯ ದುಡುಕುತ್ತಾನೆ, ಎಂಬುದನ್ನು ಅಯ್ಯ ಪಾತ್ರದ ಮೂಲಕ ಓದುಗರಿಗೊಂದು ಸಂದೇಶ ನೀಡಿದ್ದಾರೆ.

ಕನ್ನಗಿಯಮ್ಮಾಳ್‌ಗೆ ತನ್ನ ಗಂಡ ಅಯ್ಯ ಪೂವನಿಯೊಡನೆ ಹೊಂದಿದ್ದ ಸಂಬಂಧದ ವಿಚಾರ ಕುಪ್ಪ, ಕುರುಪ್ಪಮ್ಮ ನಿಂದ ತಿಳಿದ ಮೇಲೆ ಸಂಪ್ರದಾಯ, ಮಡಿವಂತಿಕೆಯ ಪೊರೆ ಒಡೆದು ಸಾಯುತ್ತಾಳೆ. ಮೇಲ್ಜಾತಿಯ ಶ್ರೀಮಂತರ ಹೀನ ನಟವಳಿಕೆಯನ್ನು ಹಾಗೆಯೆ ಕೊಳಗೇರಿಯಲ್ಲಿ ಬದುಕುತ್ತಿರುವವರ ಮಾನವೀಯತೆಯನ್ನು ಲೇಖಕರು ಮಾರ್ಮಿಕವಾಗಿ ಪ್ರತಿಬಿಂಬಿಸಿದ್ದಾರೆ. ದೇವರು ಮಡಿ, ಮೈಲಿಗೆ ಎಂಬ ಅಂಕಣ ಬರೆದು ವಾಸ್ತವಗಳಿಂದ ದೂರವೇ ಉಳಿಯುವ

ಕನ್ನಡಿ ಯಂತಾ ಪಾತ್ರಗಳು, ಕೀಳು ಜನಾಂಗದ ಪ್ರತಿನಿಧಿಯಾದ ಕುಪ್ಪನಿಂದ "ಯಾವ ಮಡಿ ಮೈಲಿಗೆ ತಳ್ಳು ತಾಯಿ, ರಕ್ತದ ಬಣ್ಣವೆಲ್ಲಾ ಒಂದೇ, ನಮ್ಮ ಗುಡಿಸಲಲ್ಲಿದ್ದು ಕೂಸು ಹೆತ್ತು ಸತ್ತು ಹೋಯಿತಲ್ಲಾ ಆ ಪಿಳ್ಳೆಯ ಬಸಿರು ಅಯ್ಯಾ ಅವರದಲ್ಲ ತಾಯಿ"[೧೫] ಎಂದು ಹೇಳಿಸುವ ಮೂಲಕ ಸಂಪ್ರದಾಯ, ಜಾತೀಯತೆಗೆ ತೆರೆಎಳೆಯುವ ಪ್ರಯತ್ನ ಮಾಡಿದ್ದಾರೆ ಹನೂರರು. ಮೇಲ್ನೋಟಕ್ಕೆ ಸಮಾಜದಲ್ಲಿ, ಸಂಪ್ರದಾಯ, ಮೇಲ್ಜಾತಿ, ಕೆಳಜಾತಿ ಎಂಬ ಬೇದ ಭಾವವನ್ನು ಪ್ರತಿಕ್ರಿಯಿಸುವ ಜನರು ಲೈಂಗಿಕ ಆಸೆಯಲ್ಲಿ ಒಂದಾಗುವ ಹಾಗೂ ಸಂಪ್ರದಾಯ, ಮಡಿಯನ್ನು ಮೀರುವುದನ್ನು ಹನೂರರು ಶಾಂತರೀತಿಯಲ್ಲಿಯೇ ಪ್ರಶ್ನಿಸಿದ್ದಾರೆ. ವಾಸ್ತವವನ್ನು ಎದುರಿಸಲಾಗಿದೆ. ಪೂವನಿಯನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡದೆ ಅಂಜುಬುರುಕನಾದ ಅಯ್ಯ ಮುಂದೊಂದು ದಿನ ಮಗುವಿನ ರೂಪದಲ್ಲಿ ಸ್ಫೋಟವಾಗುತ್ತದೆ. ಈ ವಾಸ್ತವತೆಯನ್ನು ಹನೂರರು "ಅಯ್ಯಾ ಅವರದು ಈ ಕೂಸು ಅವರೇ ಸಾಕಬೇಕು, ಅಲ್ಲೇ ಕೊಂಡು ಹೋಗಿ ಇಟ್ಟು ಬಿಡಿ ಅಂತ ಹೇಳಿ ಸತ್ತು ಹೋಯಿತು."[೧೬] ಎಂಬಲ್ಲಿ ಪ್ರಕಟ ಮಾಡುತ್ತಾರೆ. ನಿತ್ಯ ಸಾಗುವ ಬದುಕಿನಲ್ಲಿ ಪ್ರತಿಯೊಬ್ಬ ಮನುಷ್ಯನು ಎಡರುವುದು ಸಹಜ, ಆದರೆ ಇದರ ತಪ್ಪು ಕಲ್ಲಿನದಲ್ಲ ನಮ್ಮದು, ನೋಡಿ ನಡೆಯಬೇಕು. ಕೈ ಚಾಚಿದಷ್ಟು ಹಿಡಿಯಬೇಕು. ಅಷ್ಟೇ ನಮ್ಮದು, ಅಧೀನರಾದವರದೆಲ್ಲ ನಮ್ಮದೆ. ಅವರು ಏನು ಮಾಟಬಲ್ಲರು ಎಂಬ ಅಸಹಾಯಕತೆಯ ದುರುಪಯೋಗ ಶಿಷ್ಟ ಸಂಸ್ಕೃತಿಯ ಪರಿಪಾಲಕರಲ್ಲಿ ಅನಾಧಿಕಾಲದಿಂದಲೂ ಇದೇ ಎಂಬುದು ಕಾದಂಬರಿಯಲ್ಲಿನ ಒಳತಿರುಳು.

ವ್ಯಂಗ್ಯತೆಯನ್ನೇ ಮೈವೆತ್ತೆ ಈ ಕಾದಂಬರಿ ಪ್ರತಿ ಹಂತದಲ್ಲೂ ತನ್ನ ಪ್ರಭಾವವನ್ನು ಬೀರುತ್ತಲೇ ಸಾಗುತ್ತದೆ. ತನ್ನ ಹೆಂಡತಿ ನಾಗರೀಕಳಲ್ಲ ಎಂದು ಹೇಳುವ ವೇಲ ಅಯ್ಯಾ ಅವರ ನಾಗರೀಕತೆಯನ್ನು ವ್ಯಂಗ್ಯ ಮಾಡುವಂತಿದೆ. ಪ್ರತಿಬಾರಿಯೂ ನಾವು ತೋಟಕ್ಕೆ ಹೋಗಿ ಇದ್ದು ಬಿಡುವ ಎಂದು ಹೇಳುವ ಕನ್ನಗಿಯಮ್ಮಾಳ್ ಅವರ ಮಾತು ಅಯ್ಯಾ ಅವರ ನಡತೆಯನ್ನು ಪ್ರಶ್ನಿಸುತ್ತದೆ. ತನ್ನ ಪತಿ ಮತ್ತು ಪೂವನಿ ಸಂಬಂಧ ಸುಳ್ಳು ಎಂದು ತಿಳಿದು ಕುರುಪ್ಪಮ್ಮನನ್ನು ಕೇಳಲು "ಅಯ್ಯೋ ಭೂಮಿಯ ಮೇಲೆ ಹೆಣ್ಣಿಗೂ ಗಂಡಿಗೂ ಸಂಬಂಧ, ಅವರಿಬ್ಬರೂ ಹುಟ್ಟದಾಗಲೇ ಆದದ್ದೂ ತಾಯಿ, ಎಲ್ಲಾ ಕಾಲದಲ್ಲೂ ಅದು ಎಲ್ಲರಿಗೂ ಗೊತ್ತಿರುವುದೆ"[೧೭] ಎಂಬ ಮಾತು ಕಣ್ಣುತೆರೆದುವಂತದ್ದು. ಹನೂರರು ಈ ಮಾತಿನಲ್ಲಿ ಮಾನವನ ಸಹಜ ವೃತ್ತಿಗಳಲ್ಲಿ ಒಂದಾದ ಕಾಮ ಸ್ತ್ರೀ ಪುರುಷರನ್ನು ನೈತಿಕವಾಗಿಯೋ, ಅನೈತಿಕವಾಗಿಯೋ ಒಂದು ಮಾಡಿಬಿಡುತ್ತದೆ. ಸೃಷ್ಠಿ ಕ್ರಿಯೆಗೆ ಮತ್ತು ವಿಕಾಸಕ್ಕೆ ಪೂರಕ ಶಕ್ತಿಯಾಗಿ ನಿಂತುಕೊಂಡು ಇಡೀ ಬದುಕನ್ನು ಆಳುತ್ತದೆ. ಒಂದು ಬಾರಿ ಈ ಕ್ರಿಯೆ ನಡೆದರೆ ಅದು ರಹಸ್ಯವಾಗಿ

ಉಳಿಯಲು ಸಾಧ್ಯವೇ ಇಲ್ಲ. ಅದು ಮೂರನೇ ರೂಪವಾಗಿ ಬರಲೇ ಬೇಕು. ಕುರುಪ್ಪಮ್ಮನ ಮೂಲಕ ಲೋಕಾನುಭವದ ಸಹಜ ಮಾತನ್ನಾಡಿದ್ದಾರೆ ಕಾದಂಬರಿಕಾರರು.

ತನ್ನ ಪತ್ನಿಯ ಅಸ್ತಿ ಬಿಡುವ ಸಂಧರ್ಭದಲ್ಲೂ ಹುಡುಗರೊಡನೆ ಅಯ್ಯ ಅವರು ಮಾಡುವ ಚೌಕಾಸಿ ನಾಚಿಕೆ ತರುವಂತಹದ್ದು. ಹನೂರರು ದಾಂಪತ್ಯದ ತೇರನೆಳೆವ ಪತ್ನಿ ಸಾವನ್ನಪ್ಪಿದಾಗ ಪತಿಗೆ ಲೋಕವೇ ಶೂನ್ಯವಾಗಬೇಕು. ಇದು ಜೀವನ, ಆದರೆ ಶ್ರೀಮಂತರ ದುರಾಸೆಗಳು, ಅಂಟುತನ, ಇವೆಲ್ಲವೂ ಹನೂರರನ್ನು ಕಾಡಿರುವುದು ಸತ್ಯ. ಬದುಕುವುದೇ ಇಲ್ಲ ಎಂದು ತಿಳಿದರೂ ತನ್ನ ಪತ್ನಿಯನ್ನು ಆಸ್ಪತ್ರೆಗೂ ಸೇರಿಸಿ ಹಣ ಸುರಿಯುವ ಈ ಸಿರಿವಂತರಿಗೆ, ಸಮುದ್ರದಲ್ಲಿ ಈಜಿ ಹೋಗಿ ಬೂದಿ ಬಿಡುವ ಹುಡುಗನಿಗೆ ೧೦ ರೂ ಕೊಡಬೇಕಾ ಎನ್ನುವ ಅಯ್ಯಾದಂತಹ ಪಾತ್ರಗಳು ನಮ್ಮ ಕಣ್ಣು ಮುಂದಿರುವುದು ಸತ್ಯ.

"ಹೆಣ್ಣಿನಿಂದ ಗಂಡಿಗೆ, ಗಂಡಿನಿಂದ ಹೆಣ್ಣಿಗೆ ಸಿಗುವ ಸುಖ ಅಷ್ಟಕಷ್ಟೆ, ಆದರೆ ಅದಕ್ಕಾಗಿ ಎದುರಿಸಬೇಕಾದ ಭಂಗ ಬೆಟ್ಟದಷ್ಟು, ಅದರ ಮುಖೇಣ ಹುಟ್ಟಿಕೊಳ್ಳುವ ಪಾಪದ ಸಂಗತಿಗಳು, ಯಲಾ ಎಷ್ಟು ಕೊಂದರೂ ಅವು ಸಾಯುವುದೇ ಇಲ್ಲವಲ್ಲ, ಮನಸ್ಸಿನಲ್ಲಿ ಮತ್ತೆ ಮತ್ತೆ ಹುಟ್ಟುತ್ತಲೇ ಇವೆ. ಅವನ್ನು ಕೊಲ್ಲೋಣ ಅಂದರೆ ಸಾಯುವುದೇ ಇಲ್ಲ"[೧೮] ಹನೂರರು ಇಂತ ಮಾತುಗಳ ಮುಖಾಂತರ ಆತ್ಮ ವಿಮರ್ಶೆಯ ಕಡೆಗೆ ನಮ್ಮನ್ನು ಕೊಂಡೊಯ್ಯುತ್ತಾರೆ. ಅಂತಿಮವೇ ಪಶ್ಚಾತಾಪ, 'ತಾ ಮಾಡಿದ್ದು ತನಗೆ' ಎಂಬ ಮಾತು ಅಕ್ಷರ ಸಹ ಸತ್ಯ ದಾಂಪತ್ಯದ ಅಂತಿಮ ಸುಖವೇ ಮಿಲನ ನಂತರದ್ದು ಬರೀ ದುಃಖವೇ. ಹನೂರರು ಲೈಂಗಿಕತೆಯ ಬಗ್ಗೆ ಎಲ್ಲಿಯೂ ಕನಿಷ್ಠವಾಗಿ ಮಾತಾಡುವುದೇ ಇಲ್ಲ. ಅದರ ಅನುಕೂಲ ಅನಾನುಕೂಲಗಳನ್ನಷ್ಟೇ ಹೇಳಿ ವಿಮರ್ಶೆಗೆ ದಾರಿ ಮಾಡಿಕೊಟ್ಟಿದ್ದಾರೆ. ಇಲ್ಲಿ ಅಯ್ಯ ಬೇರೆ ಮನೆಯ ಬೆಳಕನ್ನು ಆರಿಸಿ, ತನ್ನ ಮನೆಯನ್ನು ಸುಟ್ಟುಕೊಳ್ಳುವ ರೀತಿ ಹೇಸಿಗೆ ಎನಿಸುತ್ತದೆ. ಬದುಕು ಆಸೆಗಳ ಮೇಲೆ ನಿಂತಿದೆ, ಹಾಗಾಗಿ ಇದು ಮನುಷ್ಯ ಬದುಕಿನ ಆಂತರ್ಯವೂ ಕೂಡ, ಅಂತರಗಳ ಪರಿವಿಲ್ಲದೆ ಪಡುವ ಆಸೆಗಳು ನ್ಯೂನತೆಗೆ ಕಾರಣವಾಗುತ್ತವೆ. ಅಂತಹ ಪ್ರಯತ್ನದ ಪರಿಣಾಮವನ್ನು ಹೇಳುವ ಕಾದಂಬರಿ ನಿಕ್ಷೇಪ.

ಈ ಕಾದಂಬರಿಯ ವ್ಯಂಗ್ಯದ ದೃಷ್ಟಿಯಿಂದ ಹೇಗೆ ಪ್ರಭಾವ ಬೀರುವುದು ಹಾಗೆ ಭಾಷೆಯ ದೃಷ್ಟಿಯಿಂದಲೂ ಉತ್ತಮವೆನಿಸಿದೆ. ಸರಾಗವಾಗಿ ಓದಿಸಿ ಕೊಂಡು ಹೋಗುವ ಕಾದಂಬರಿ, ಸಂದರ್ಭೋಚಿತ ಸನ್ನಿವೇಷಗಳಿಂದ ಕಾದಂಬರಿ ಸೊಗಸೆನಿಸುತ್ತದೆ.

ಕಾದಂಬರಿ ಕೊನೆಯಲ್ಲಿ ಅಯ್ಯಾ ಆಡುವ ಮಾತು "ಅದೆಲ್ಲದರ ನಾಶದ ಮೂಲ ನಾನೇ ಆದೆ. ಬದುಕಿನಲ್ಲಿ ಉಳಿದ ಸ್ವಾರಸ್ಯ ಇನ್ನೇನು? ಅಂದ ಮೇಲೆ ಜೀವನ ನನಗೆ ಅಗತ್ಯವಿದೆಯೇ"[೧೯] ಪಾಪದ ಸಂಗತಿಗಳು ಒಂದಾದ ಮೇಲೆ ಒಂದನ್ನು ಕಿತ್ತುಕೊಂಡಾಗ ಜೀವನದ ಸಖ್ಯ ಬೇಸರಗೂಳ್ಳುತ್ತದೆ. ಇದನ್ನೆ ಹನೂರರು ಹೇಳ ಹೊರಟಿರುವುದು. ನಿಕ್ಷೇಪ ಕಾದಂಬರಿಯ ತಿರುಳಿರುವುದು ಇಲ್ಲಿಯೇ ಬದುಕುವ ಆಸೆಗಳೇ 'ನಿಕ್ಷೇಪ'. ಅಂತಹ ಆಸೆಗಳನ್ನು ನಾಶ ಮಾಡಿದ್ದು ನಾನೇ ಎಂಬ ಕಥಾನಾಯಕನ ಕೊನೆಯ ಮಾತು ಕಾದಂಬರಿಯನ್ನು ಸಾರ್ಥಕ್ಯಗೊಳಿಸುತ್ತದೆ. ಅರಿತು ಓದುವವನಿಗೆ ದೊರಕುವುದು 'ನಿಕ್ಷೇಪ'.

ಒಂದು ಕ್ಷಣದ ಸುಖ ಇಡೀ ಜೀವನವನ್ನು ದುಃಖಮಯವಾಗಿಸುವ ರೀತಿಯನ್ನು ಅದರಲ್ಲೂ ಹೆಣ್ಣಿನ ಸಹವಾಸ ಎಂಥದ್ದು ಎಂದರೆ "ಈ ಮನೆ ಹಾಳು ಹೆಂಗಸರ ಸಹವಾಸವೇ ಇಂಥದ್ದು, ಮುಳ್ಳು ಹಿಡಿದ ಮರ ಹತ್ತಿದಂತೆ, ಯಾವ ಕಡೆ ಅಲ್ಲಾಡಿದರೂ ಚುಚ್ಚುವುದೇ, ಇಳಯುವಂತಿಲ್ಲ ಹತ್ತುವಂತಿಲ್ಲ."[೨೦] ಏಂಬ ಅಯ್ಯಾ ಆಡುವ ಮಾತು ದುರಾಸೆಯ ಫಲವೇ ಆಗಿದೆ, ಪರನಾರಿಯ ಸಂಗವೇ ಮುಳ್ಳು ಎಂಬುದು ಹನೂರರು ಅಭಿಪ್ರಾಯ, ವಾಸ್ತವಾಗಿ ಮುಳ್ಳಿನ ಹೋಲಿಕೆ ಅನೈತಿಕ ಸಂಗದ ಸಂಕೇತವಷ್ಟೇ.

'ನಿಕ್ಷೇಪ' ಕಾದಂಬರಿ ವಾಸ್ತವವಾಗಿ ಒಂದು ಸಾಮಾಜಿಕ ಕಾದಂಬರಿ. ಒಂದು ಸಮಾಜದೊಳಗಿನ ನ್ಯೂನತೆಗಳನ್ನು, ದ್ವಂದ್ವಗಳನ್ನು ಹೇಳುವ ಪ್ರಯತ್ನ ಮಾಡಿದೆ. ಪ್ರಸ್ತುತ ಸಂಧರ್ಭಕ್ಕೆ ಕಾದಂಬರಿಯನ್ನು ಅವಲೋಕಿಸಿದಾಗ ಸಮಾಜ ಎಂದೆಂದಿಗೂ ಒಳಿತು, ಕೆಡುಕುಗಳೊಡನೆ ಸಾಗಬೇಕಾದ ಅನಿವಾರ್ಯತೆ ಎದುರಾಗುತ್ತದೆ. ಎಲ್ಲವು ಒಂದೇ ಸಮವಿಲ್ಲ, ಹಾಗಾಗಿ ಹನೂರರು ಕಾದಂಬರಿಯನ್ನು ಪ್ರತಿಯೊಂದು ಕಾಲದ ಪ್ರತಿಯೊಬ್ಬ ಓದುಗನನ್ನು ಆತ್ಮವಿಮರ್ಶೆಗೆ ಒಳಪಡಿಸಿದ್ದಾರೆ. 'ನಿಕ್ಷೇಪ' ಹುದುಗಿಸಿಟ್ಟ ಮುಂದಿನ ಬದುಕಾಗಿದೆ. ಭವಿಷ್ಯದಲ್ಲಾಗುವ ಬದಲಾವಣೆಗಳಿಗೆ ವರ್ತಮಾನದಲ್ಲಿಡುವ ಪ್ರತಿಯೊಂದು ಹೆಜ್ಜೆಯೂ ಸಾಕ್ಷಿಯಾಗುತ್ತದೆ. ಎಂಬ ಅರಿವನ್ನು ಹನೂರರು ತಿಳಿಸಿದ್ದಾರೆ.

ಒಟ್ಟಾರೆಯಾಗಿ 'ನಿಕ್ಷೇಪ' ಕಾದಂಬರಿಯಲ್ಲಿ ಬರುವ ಕನ್ನಗಿಯಮ್ಮಳ್, ವೇಲ, ಕಲ್ಯಾಣ ಸುಂದರ, ಶ್ರೀವಳ್ಳಿಯಂತಹ ಪಾತ್ರಗಳು ವಸ್ತುವಿನ ಸಮಗ್ರತೆಯಲ್ಲಿ ಒಂದಾಗಿ ವಿವಿಧ ಸಂಸ್ಕೃತಿಗಳ ಭಾಗಗಳಾಗಿ, ಪ್ರತಿನಿಧಿಗಳಾಗಿ ಕಂಡುಬರುತ್ತವೆ. ಕಾದಂಬರಿಯಲ್ಲಿ ಕಂಡುಬರುವ ಪಾಶ್ಚಾತ್ಯ, ನಾಗರೀಕ ಮತ್ತು ಬುಡಕಟ್ಟು ಸಂಸ್ಕೃತಿಗಳ ವಿವಿಧ ಆಯಾಮಗಳನ್ನು ಮುಖಾಮುಖಿಯಾಗಿಸಿ ಸಮಾಜದ ದ್ವಂದ್ವಗಳನ್ನು ದಾಖಲಿಸುತ್ತದೆ.

ಕೃಷ್ಣ ಮೂರ್ತಿ ಹನೂರು ಅವರ 'ಬಾರೊಗೀಜಗನೆ' ಮತ್ತು 'ನಿಕ್ಷೇಪ' ಕಾದಂಬರಿಗಳು ನವ್ಯೋತ್ತರ ಸಾಹಿತ್ಯದಲ್ಲಿ ಉತ್ತಮ ಕಾದಂಬರಿಗಳೆನಿಸಿಕೊಂಡಿವೆ. ಇವರ ಕಾದಂಬರಿಗಳ ಕಥಾಲೋಕ ಮನುಷ್ಯನ ಅಂತರಂಗದ ಒಳಸೂಕ್ಷ್ಮಗಳನ್ನು ತೆರೆದಿಡುತ್ತದೆ. ಜಾನಪದ ವಿದ್ವಾಂಸರಾಗಿ, ಸಂಸ್ಕೃತಿಯ ಚಿಂತಕರಾಗಿ ಸಮಾಜದ ಗಂಭೀರ ಸಮಸ್ಯೆಗಳನ್ನು ತಮ್ಮ ಕಾದಂಬರಿಗಳಲ್ಲಿ ವಿಶ್ಲೇಷಣೆಗೆ ಒಳಪಡಿಸಿರುತ್ತಾರೆ. ಅವರ ನೈಜ ಅನುಭವಗಳ ಸೃಜನಶೀಲ ಬರವಣಿಗೆಯಿಂದಾಗಿ ಕನ್ನಡಕ್ಕೆ ದೊರೆತ ಉತ್ತಮ ಕಾದಂಬರಿಕಾರರಲ್ಲಿ ಒಬ್ಬರಾಗಿದ್ದಾರೆ.

**ಅಡಿಟಿಪ್ಪಣಿ :-**

೧ : ಜಿ.ಎಸ್. ಆಮೂರ : ಕನ್ನಡ ಕಥನ ಸಾಹಿತ್ಯ : ಕಾದಂಬರಿ : ಪುಟ : ೧೯

೨ : ಎಲ್.ಎಸ್. ಶೇಷಗಿರಿರಾವ್ : ಭಾರತೀಯ ಸಾಹಿತ್ಯ ಸಮೀಕ್ಷೆ : ಪುಟ : ೬೪೩

೩ : ಕೃಷ್ಣಮೂರ್ತಿ ಹನೂರು : ಬಾರೊ ಗೀಜಗನೆ : ಅಂತರಂಗ

೪ : ಮಾವಿನಕೆರೆ ರಂಗನಾಥ : ಬಾರೊ ಗೀಜಗನೆ : ಬೆನ್ನುಡಿ

೫ : ಕೆ.ರಾಮನ್ : ನಿಕ್ಷೇಪ : ಬೆನ್ನುಡಿ

೬ : ಕೃಷ್ಣಮೂರ್ತಿ ಹನೂರು : ಬಾರೊ ಗೀಜಗನೆ : ಅಂತರಂಗ

೭ : ಜಿ.ಆರ್. ತಿಪ್ಪೇಸ್ವಾಮಿ : ಬಿತ್ತಿ ಬೆಳೆದವರು : ಪುಟ : ೭೧

೮ : ಕೃಷ್ಣಮೂರ್ತಿ ಹನೂರು : ಬಾರೊ ಗೀಜಗನೆ : ಪುಟ : ೧೫

೯ : ಅದೇ : ಪುಟ : ೧೬

೧೦ : ಅದೇ : ಪುಟ : ೫೧

೧೧ : ಅದೇ : ಪುಟ : ೬೭

೧೨ : ಅದೇ : ಪುಟ : ೧೧೬

೧೩ : ಕೃಷ್ಣಮೂರ್ತಿ ಹನೂರು : ನಿಕ್ಷೇಪ : ಪುಟ : ೪೯

೧೪ : ಅದೇ : ಪುಟ : ೩೮

೧೫ : ಅದೇ : ಪುಟ : ೨೧೨

೧೬ : ಅದೇ : ಪುಟ : ೨೧೨

೧೭ : ಅದೇ : ಪುಟ : ೨೧೮

೧೮ : ಅದೇ : ಪುಟ : ೨೩೮

೧೯ : ಅದೇ : ಪುಟ : ೨೩೮

೨೦ : ಅದೇ : ಪುಟ : ೧೩೯

# ಉಪಸಂಹಾರ

ಕನ್ನಡ ಸಂಶೋಧನೆಗೆ ಸುಮಾರು ನೂರು ವರ್ಷಗಳ ಇತಿಹಾಸವಿದೆ. ನಮ್ಮ ಸಂಶೋಧನೆಯು ಆರಂಭವಾದ ಸಂಧರ್ಭದಲ್ಲಿ ಕೇವಲ ಸಂಗ್ರಹಣೆಗೆ ಮಾತ್ರ ಹೆಚ್ಚು ಒತ್ತುಕೊಟ್ಟಿತು. ಆದರೆ ಆಳವಾದ ವಿಶ್ಲೇಷಣೆಯನ್ನು ಒಳಗೊಂಡ ಸಂಶೋಧನೆಯು ಆರಂಭವಾದದ್ದು ಕಳೆದೆರೆಡು ದಶಕಗಳಿಂದೀಚೆಗೆ ಆದಾಗ್ಯೂ ನಾವು ಇಂದಿಗೂ ಸಹ ಹೇಳಿಕೊಳ್ಳುವಂತಹ ಸಂಶೋಧನೆಯ ಹಾದಿ ಹಿಡಿದಿಲ್ಲ. ಸಾಹಿತ್ಯ ಕುರಿತಾದಂತಹ ಸಂಶೋಧನೆಗಳು ಇಂದು ಸರ್ಕಾರದ ಪ್ರೋತ್ಸಾಹದಿಂದ ಸ್ವಲ್ಪ ಉತ್ಸಾಹ ಕಂಡುಕೊಂಡಿದೆ. ನಮ್ಮಲ್ಲಿನ ಜಾನಪದ ಮತ್ತು ಇದರ ಬೆಂಬಲದಿಂದಲೇ ಬೆಳೆದುಬಂದಂತಹ ಸೃಜನಶೀಲ ಸಾಹಿತ್ಯ ಬೃಹತ್ತಾಗಿ ಬೆಳೆದುನಿಂತಿದೆ. ಇಂತಹ ಸಾಹಿತ್ಯ ಕುರಿತಾಗಿ ನಡೆಯಬೇಕಾದ ಸಂಶೋಧನೆಗಳು ಮೂಡಿ ಬರಬೇಕಾಗಿದೆ. ಇಂತಹ ಒಂದು ಪ್ರಯತ್ನದ ಫಲವಾಗಿಯೇ ಸಾಹಿತ್ಯದ ಪ್ರಕಾರವಾದ ಕಥಾಸಾಹಿತ್ಯವನ್ನಿಟ್ಟುಕೊಂಡು ಸಮಾಜದ ವಾಸ್ತವ ಸ್ಥಿತಿಗತಿಗಳೊಡನೆ ಭಾಗವಾಹಿಸಿ ಅಧ್ಯಯನ ಮಾಡುವ ಪ್ರಯತ್ನಮಾಡಿದ್ದೇನೆ.

ಸಮಾಜದ ವ್ಯವಸ್ಥೆಯ ಬಗೆಗಿನ ಕಾಳಜಿಯಿಂದ ಈ ನಿಬಂಧ ತಯಾರಿಕೆಗೆ ಕೃಷ್ಣಮೂರ್ತಿ 'ಹನೂರು ಅವರ ಕಥಾಸಾಹಿತ್ಯ'ವನ್ನು ಆಯ್ಕೆಮಾಡಿಕೊಂಡು ಬದುಕಿನ ಸ್ಥಿತ್ಯಂತರಗಳನ್ನು ಅಧ್ಯಯನ ಮಾಡುವ ನನ್ನ ಉದ್ದೇಶ ತೃಪ್ತಿ ತಂದಿದೆ. ನಾನು ವಿಭಾಗ ಮಾಡಿಕೊಂಡ ಅಧ್ಯಾಯಗಳಿಗೆ ಅನುಗುಣವಾಗಿ ಅಧ್ಯಯನವು ನಡೆದಿದೆ ಎಂದೂ, ನಿಬಂಧದ ಅಧ್ಯಯನ ವ್ಯಾಪ್ತಿಯನ್ನು ಯಾವ ಅಧ್ಯಾಯದಲ್ಲೂ ಮೀರಿ ಹೋಗಿಲ್ಲವೆಂದು ಸ್ಪಷ್ಟಪಡಿಸುತ್ತೇನೆ. ಆಯ್ದುಕೊಂಡ ಕಥಾಸಾಹಿತ್ಯದ ಒಳಗೆ ನಿಂತು ಸಮಾಜದ ಅಂಕು ಡೊಂಕುಗಳನ್ನು, ವ್ಯಂಗ್ಯವನ್ನು, ಮತ್ತು ಪರಿಹಾರಗಳನ್ನು ತಿಳಿಸುವ ಹನೂರರ ಕಥಾಹಿಂದರಗಳಲ್ಲೂ ಜೀವ ಪರ ಮೌಲ್ಯಗಳನ್ನು ಗುರುತಿಸಿದ್ದೇನೆ.

ನಿಬಂಧ ರಚನೆಯಲ್ಲಿ ಪುಸ್ತಕಗಳು ಗ್ರಂಥಾಲಯದ ಮೂಲಕ, ಲೇಖಕರ ಮೂಲಕ, ಪುಸ್ತಕ ಮಳಿಗೆಗಳಲ್ಲಿ ದೊರೆತು ಅಧ್ಯಯನಕ್ಕೆ ಸಹಕಾರಿಯಾಯಿತು. ಒಟ್ಟು ಆರು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಅಧ್ಯಯನವನ್ನು ಪೂರ್ಣಗೊಳಿಸಿದ್ದೇನೆ.

ಮೊದಲ ಅಧ್ಯಾಯದಲ್ಲಿ ಸಂಶೋಧನೆಯ ಹಾದಿಯನ್ನು, ಈ ವಿಷಯವನ್ನು ಆಯ್ದುಕೊಂಡ ಉದ್ದೇಶ, ಮತ್ತು ಅದು ಒಳಗೊಂಡಿರುವ ವ್ಯಾಪ್ತಿಯನ್ನು ಕುರಿತು ಹೇಳಿದ್ದೇನೆ.

ಎರಡನೇ ಅಧ್ಯಾಯದಲ್ಲಿ ಕನ್ನಡ ಕಥಾಸಾಹಿತ್ಯದ ಸ್ವರೂಪ ಕುರಿತಂತೆ ಸಣ್ಣಕತೆಯ ಪ್ರಾರಂಭದ ಹಂತ, ಸಣ್ಣಕತೆ ಕನ್ನಡ ಸಾಹಿತ್ಯದಲ್ಲಿ ವಿವಿಧ ಪಂಥಗಳಲ್ಲಿ ಬೆಳೆದು ಬಂದ ಬಗೆ, ಹಾಗೂ ಕಾಲಕಾಲಕ್ಕೆ ಸಣ್ಣಕತೆಯು ಪಡೆದ ವಸ್ತು, ನಿರೂಪಣೆ, ಉದ್ದೇಶಗಳ ಬದಲಾವಣೆಯನ್ನು ಕುರಿತು ಸ್ಥೂಲವಾಗಿ ಚಿತ್ರಣ ನೀಡಲಾಗಿದೆ.

ಮೂರನೇ ಅಧ್ಯಾಯದಲ್ಲಿ ಕೃಷ್ಣಮೂರ್ತಿ ಹನೂರು ಅವರ ಜೀವನ ಮತ್ತು ವ್ಯಕ್ತಿತ್ವ ಕುರಿತಂತೆ ಹೇಳಲಾಗಿದೆ. ಇಲ್ಲಿ ಅವರು ಹುಟ್ಟಿ ಬೆಳೆದ ಹಳ್ಳಿ, ಪರಿಸರ, ಅವರ

ಬಾಲ್ಯ, ವಿದ್ಯಾಭ್ಯಾಸದ ವಿವಿಧ ಹಂತಗಳು, ವೃತ್ತಿ ಜೀವನ, ಕ್ಷೇತ್ರಕಾರ್ಯದ ಹಾಗಿಗಳು ಅವರಿಗೆ ಪ್ರೋತ್ಸಾಹ ನೀಡಿದ ಗುರುಗಳು, ನಿತ್ಯ ಜೊತೆಜೊತೆಯಾಗಿ ನಿಂತ ಅವರ ಸ್ನೇಹವರ್ಗ ಮತ್ತು ಕುಟುಂಬ ವರ್ಗಗಳ ಬಗ್ಗೆ ಮಾಹಿತಿ ದೊರೆತ ಆಧಾರದ ಮೇಲೆ ಹೇಳಲಾಗಿದೆ. ಒಟ್ಟಾರೆ ಅವರ ಜೀವನದ ಹಂತಗಳು ಹಾಗೂ ಅವರ ವ್ಯಕ್ತಿತ್ವ ಕುರಿತಂತೆ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಕೃಷ್ಣಮೂರ್ತಿ ಹನೂರು ಅವರ ಸಣ್ಣಕತೆಗಳನ್ನು ಸಾಮಾಜಿಕ ಪ್ರಜ್ಞೆ ಜಾನಪದೀಯ ಅಂಶ, ಮತ್ತು ಬುಡಕಟ್ಟು ಬದುಕು ಎಂಬ ಮೂರು ಹಿನ್ನೆಲೆಯಲ್ಲಿ ಅವರ ಮೂರು ಕಥಾಸಂಕಲನಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದೇನೆ. ಕೇರಿಗೆ ಬಂದ ಹೋರಿ ಕಥಾಸಂಕಲನದಲ್ಲಿ ಮುದ್ರಣಗೊಂಡಿದ್ದ 'ಮಾದೇವಿ ಊರು ಬಿಟ್ಟಳು', 'ಕೈ ತಪ್ಪಿದ ಕುರಿ', 'ಬಿದ್ದ ಶಿಕಾರಿ' ಕತೆಗಳು 'ಕಳೆದ ಮಂಗಳವಾರ ಮುಸ್ಸಂಜೆ' ಕಥಾ ಸಂಕಲನದಲ್ಲೂ ಮರು ಮುದ್ರಣಗೊಂಡಿದ್ದರಿಂದ ಇಲ್ಲಿ ಅವುಗಳನ್ನು ಕೈ ಬಿಟ್ಟಿದ್ದೇನೆ. ಅದೇ ರೀತಿ 'ಕೇರಿಗೆ ಬಂದ ಹೋರಿ' ಕಥಾಸಂಕಲನದಲ್ಲಿ 'ಕುಂಡಜ್ಜನ ಪರ್ಸಂಗ' 'ಕತ್ತಲಲ್ಲಿ ಕಂಡ ಮುಖ' ಕಥಾಸಂಕಲನದಲ್ಲಿದ್ದ ಮರು ಮುದ್ರಣಗೊಂಡಿರುವುದರಿಂದ ಇಲ್ಲಿ ಆ ಕತೆಯನ್ನು ಕೈ ಬಿಟ್ಟಿದ್ದೇನೆ. ಒಟ್ಟು ಮೂರು ಕಥಾಸಂಕಲನಗಳಿಂದ 25 ಕತೆಗಳನ್ನು ಈ ಅಧ್ಯಾಯದಲ್ಲಿ ಸಂಪೂರ್ಣವಾಗಿ ಅಧ್ಯಯನಕ್ಕೆ ಒಳಪಡಿಸಿದ್ದೇನೆ. ಹಾಗೂ ಈ ಕತೆಗಳಲ್ಲಿ ಕಂಡುಬರುವ ಮೇಲೆ ತಿಳಿಸಿದ ಮೂರು ನೆಲೆಗಳಲ್ಲಿ ನಿಂತು ನೋಡುವ ಪ್ರಯತ್ನ ಮಾಡಲಾಗಿದೆ.

ಐದನೇ ಅಧ್ಯಾಯದಲ್ಲಿ 'ಕೃಷ್ಣಮೂರ್ತಿ ಹನೂರು' ಅವರ ಕಾದಂಬರಿಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದೇನೆ. 'ಬಾರೊ ಗೀಜಗನೆ' ಮತ್ತು 'ನಿಕ್ಷೇಪ' ಎರೆಡೂ ಕಾದಂಬರಿಗಳನ್ನು ಸಂಪೂರ್ಣವಾಗಿ ಸಾಮಾಜಿಕ ನೆಲೆಯಲ್ಲಿ ನಿಂತು ನೋಡುವ ಪ್ರಯತ್ನ ಮಾಡಿದ್ದೇನೆ. ಕಾದಂಬರಿಗಳಲ್ಲಿ ಬರುವ ಬುಡಕಟ್ಟು ಬದುಕು ಮತ್ತು ಪಾಶ್ಚಾತ್ಯ ಬದುಕುಗಳ ತಿಕ್ಕಾಟವನ್ನು ಇದರಿಂದ ಸಮಾಜದ ಮೇಲಾಗುತ್ತಿರುವ ಪರಿಣಾಮವನ್ನು ಗುರುತಿಸಿದ್ದೇನೆ.

ನಾನು ವಿಭಾಗ ಮಾಡಿಕೊಂಡ ಅಧ್ಯಾಯಗಳಿಗೆ ಅನುಗುಣವಾಗಿ ಅಧ್ಯಯನವನ್ನು ಪೂರ್ಣಗೊಳಿಸಿದ್ದೇನೆ. ಎಲ್ಲಾ ಅಧ್ಯಾಯಗಳನ್ನು ಉದ್ದೇಶ ಮತ್ತು ವ್ಯಾಪ್ತಿಗೆ ಅನುಗುಣವಾಗಿಯೇ ವಿಷಯಗಳನ್ನು ವಿಶ್ಲೇಷಣೆ ಮಾಡಿದ್ದಾನೆ. ಆಯ್ದುಕೊಂಡ ಕಥಾ ಸಾಹಿತ್ಯವನ್ನು ಬುಡಕಟ್ಟು ಬದುಕಿನ ನೋವು-ನಲಿವುಗಳನ್ನು ಹೆಚ್ಚು ಗುರುತಿಸುವ ಆಸಕ್ತಿ ತೋರಿದ್ದೇನೆ.

ಆಯ್ದುಕೊಂಡ ಅಧ್ಯಾಯಗಳ ಅಧ್ಯಯನವನ್ನು ಈ ಉಪಸಂಹಾರದಲ್ಲಿ ಸೂಚ್ಯವಾಗಿ ಹೇಳಿದ್ದೇನೆ. ಅನುಬಂಧದಲ್ಲಿ ಕೃಷ್ಣಮೂರ್ತಿ ಹನೂರು ಅವರ ಪ್ರಕಟಿತ ಕೃತಿಗಳ ವಿವರವನ್ನು ನೀಡಿದ್ದೇನೆ ಹಾಗೂ ಪ್ರತಿ ಅಧ್ಯಾಯದ ಕೊನೆಯಲ್ಲಿ ಅಡಿಟಿಪ್ಪಣಿಗಳ ವಿವರವನ್ನು ನೀಡಿದ್ದೇನೆ.

ಒಟ್ಟಾರೆಯಾಗಿ ಆಯ್ದುಕೊಂಡ ಕಾಥಾಸಾಹಿತ್ಯವನ್ನು ಅಧ್ಯಯನಕ್ಕೆ ಒಳಪಡಿಸುವಾಗ ಸಣ್ಣಕತೆಯು ಸಮಾಜದ ಮೇಲೆ ಬೀರುವ ಪ್ರಭಾವ ತೀಕ್ಷ್ಣತೆ ಹೆಚ್ಚೆಂದು ತಿಳಿದು ಬರುತ್ತದೆ. ಕೃಷ್ಣಮೂರ್ತಿ ಹನೂರು ಅವರ ಸಣ್ಣಕತೆಗಳು ಪೂರ್ಣ ಸಾಮಾಜಿಕ ಅನುಭವದ ನೆಲೆಯಲ್ಲಿ ಬರೆಯಲ್ಪಟ್ಟಿರುವುದು ಅವರ ಕ್ಷೇತ್ರಕಾರ್ಯದಲ್ಲಿ ದೊರೆತ ಕಥಾನಾಯಕರ ಜೀವನವನ್ನೆ ಹೇಳುತ್ತವೆ. ಇಂತಹ ಬುಡಕಟ್ಟು ಜನರ ಜೀವನದ ಅಧ್ಯಯನವೇ ಆಗಿ ಈ ನಿಬಂಧ ಪೂರ್ಣತೆ ಪಡೆದಿದೆ. ನಿಬಂಧದ ಕೊನೆಯಲ್ಲಿ ಪರಾಮರ್ಶನ ಮಾಡಿದ ಗ್ರಂಥಗಳ ಸಂಪೂರ್ಣ ವಿವರವನ್ನು ನೀಡಲಾಗಿದೆ.

# ಅನುಬಂಧ

## ಕೃಷ್ಣಮೂರ್ತಿಹನೂರು ಅವರ ಪ್ರಕಟಿತ ಕೃತಿಗಳು :

೧. ಲೀಲಾವತಿ-ಪದ್ಮಾವತಿ : (ಜನಪದ ಕಥಾಸಂಕಲನ) ೧೯೭೮, ಚಿತ್ರದುರ್ಗ.

೨. ಇದು ಎಂಥ ಜೀವನವಯ್ಯ : (ಸಂಸ್ಮರಣಗ್ರಂಥ – ಇತರರೊಡನೆ ಸಂಪಾದಿತ) ೧೯೭೮
ಚಿನ್ಮಯ ಪ್ರಕಾಶನ ಸಮಿತಿ, ಚಿತ್ರದುರ್ಗ, (ಮರು ಮುದ್ರಣ : ೨೦೦೩)

೩. ಚಿನ್ಮಯ : (ಅಭಿನಂದನ ಗ್ರಂಥ – ಇತರರೊಡನೆ ಸಂಪಾದಿತ) ೧೯೭೮, ಚಿನ್ಮಯ ಪ್ರಕಾಶನ ಸಮಿತಿ, ಚಿತ್ರದುರ್ಗ.

೪. ಕತ್ತಲ ದಾರಿ ದೂರ : (ಜನಪದ ಕಥನಗೀತೆಗಳ ಸಂಕಲನ) ೧೯೮೩, ಪ್ರ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು (ಮರುಮುದ್ರಣ : ೨೦೦೨)

೫. ಬಾರೊಗೀಜಗನೆ : (ಕಾದಂಬರಿ) ೧೯೮೫, ಪ್ರ.ಪುರೋಗಾಮಿ ಸಾಹಿತ್ಯ ಸಂಘ, ಬೆಂಗಳೂರು.

೬. ಜನಪದ ವೀರಗೀತೆಗಳು : (ಜನಪದ ಕಥನಗೀತೆಗಳ ಸಂಕಲನ) ೧೯೮೭, ಪ್ರ ಮೈಸೂರು ವಿಶ್ವವಿದ್ಯಾನಿಲಯ ಪ್ರಸಾರಾಂಗ, ಮೈಸೂರು.

೭. ನ್ಯಾಯಗಾರನ ಹೆಂಡತಿ : (ಜನಪದ ಕಥಾಸಂಕಲನ) ೧೯೮೮, ಹೊನ್ನಾವರ ಪ್ರಕಾಶನ, ಹೊನ್ನಾವರ.

೮. Encyclopaedia of Flok culture of Karnataka : 1991, pub. Institute of Asain Studies, Chennai.

೯. ಕೇರಿಗೆ ಬಂದ ಹೋರಿ : (ಕಥಾ ಸಂಕಲನ) ೧೯೯೧, ಪ್ರ ಪುರೋಗಾಮಿ ಸಾಹಿತ್ಯ ಸಂಘ, ಬೆಂಗಳೂರು (ಮರುಮುದ್ರಣ : ೧೯೯೨)

೧೦. ಮ್ಯಾಸಬೇಡರ ಸಂಸ್ಕೃತಿ : (ಬುಡಕಟ್ಟು ಸಂಶೋಧನಾಕೃತಿ) ೧೯೯೩, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು (ಮರುಮುದ್ರಣ : ೨೦೦೭)

೧೧. ನಂಜುಂಡ ಕವಿ : ೧೯೯೬, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೨. ನಿಕ್ಷೇಪ : (ಕಾದಂಬರಿ) ೧೯೯೮, ಪ್ರ ಸಂವಹನ ಪ್ರಕಾಶನ, ಮೈಸೂರು (ಮರುಮುದ್ರಣ : ೨೦೦೧)

೧೩. ಸುವರ್ಣ ಜಾನಪದ – ಎರಡು ಸಂಪುಟಗಳಲ್ಲಿ : (ಜಾನಪದ ಲೇಖನಗಳ ಸಂಗ್ರಹ ಇತರರೊಡನೆ ಸಂಪಾದಿತ) ೧೯೯೮, ಕರ್ನಾಟಕ ಜಾನಪದ ಅಕಾಡೆಮಿ, ಬೆಂಗಳೂರು.

೧೪. ಕರ್ನಾಟಕ ಬುಡಕಟ್ಟುಗಳು – ಎರಡು ಸಂಪುಟಗಳಲ್ಲಿ : (ಇತರರೊಡನೆ ಸಂಪಾದಿತ) ೧೯೯೮, ಕರ್ನಾಟಕ ಜಾನಪದ ಅಕಾಡೆಮಿ, ಬೆಂಗಳೂರು.

೧೫. ಬುಡಕಟ್ಟು ಮತ್ತು ಜನಪದ ಗೀತೆಗಳು : ೧೯೯೮, ಪ್ರ. ಕೇಂದ್ರ ಸಾಹಿತ್ಯ ಅಕಾಡೆಮಿ, ನವದೆಹಲಿ.

೧೬. ಬಿ. ಪುಟ್ಟಸ್ವಾಮಯ್ಯ, ಜೀವನ ಮತ್ತು ಕೃತಿಪರಿಚಯ : ೨೦೦೧ ಪ್ರ ನವಕರ್ನಾಟಕ ಪ್ರಕಾಶನ, ಬೆಂಗಳೂರು. (ಮರುಮುದ್ರಣ : ೨೦೦೬)

೧೭. ಕರ್ನಾಟಕದ ಅರಸು : ೨೦೦೧, (ಇತರರೊಡನೆ ಸಂಪಾದಿತ) ಪ್ರ. ರಚನ ಪ್ರಕಾಶನ, ಮೈಸೂರು.

೧೮. ಗೆಂಡಗಯ್ಯ–ಒಳವು : (ಕೆ. ನ. ಶಿವತೀರ್ಥನ್ನರ ಕವನಗಳ ವಿಮರ್ಶಾ ಸಂಕಲನ) : ೨೦೦೧ ಪ್ರ. ನೈರುತ್ಯ ಪ್ರಕಾಶನ, ಮೈಸೂರು.

೧೯. ಕತ್ತಲಲ್ಲಿ ಕಂಡ ಮುಖ : (ಕಥಾ ಸಂಕಲನ) : ೨೦೦೨, ಪ್ರ. ಸಂವಹನ ಪ್ರಕಾಶನ, ಮೈಸೂರು.

೨೦. ಹಾದಿಯೊಳಗಣ ಜ್ಯೋತಿ : (ಪ್ರವಾಸ ಪ್ರಬಂಧಗಳು) : ೨೦೦೩, ಪ್ರ ಸಂವಹನ ಪ್ರಕಾಶನ, ಮೈಸೂರು.

೨೧. ಸಾವಿರದ ಸಿರೆ ಬೆಳಗು : (ಜನಪದ ಕಥನ ಗೀತೆಗಳ ಸಂಕಲನ) : ೨೦೦೫, ಪ್ರ. ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.

೨೨. ನುಡಿಶೋಧ : (ಸಂಶೋಧನಾ ಲೇಖನಗಳು) : ೨೦೦೫, ಪ್ರ. ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೨೩. ಜನಪದ ಐತಿಹಾಸಿಕ ಕಥನ ಗೀತೆಗಳು : ೨೦೦೬, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು.

೨೪. ಸುವರ್ಣ ಕಥಾ ಸಂಪುಟ : (ವಿವಿಧ ಲೇಖಕರ ಕಥಾ ಸಂಕಲನ) : ೨೦೦೭, ಪ್ರ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೨೫. Visage in the dark and other stories : (short Stories Collection) : 2007, Abhiruchi Publication, Mysore.

೨೬. Myasa Bedaru : (A Tribal Study) : 2007, Pub. Dravidian University, Kuppam.

# ಪಾರಾಮರ್ಶನ ಗ್ರಂಥಗಳು


| | | | |
|---|---|---|---|
| ೧. | ಶತಮಾನದ ಸಣ್ಣ ಕಥೆಗಳ ಸಮೀಕ್ಷೆ | : | ಕರೀಗೌಡ ಬೀಚನಹಳ್ಳಿ<br>ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು. |
| ೨. | ಕಥೆ–ಕಥನ | : | ಎಸ್. ಪ್ರಸಾದಸ್ವಾಮಿ<br>ಧಾತ್ರಿ ಪುಸ್ತಕ ಮಾಲೆ, ಬೆಂಗಳೂರು ೨೦೦೭ |
| ೩. | ಮ್ಯಾಸಬೇಡರು | : | ಕೃಷ್ಣಮೂರ್ತಿ ಹನೂರು<br>ಸಂವಹನ ಪ್ರಕಾಶನ, ಮೈಸೂರು. ೧೯೯೩ |
| ೪. | ಬಿತ್ತಿ ಬೆಳೆದವರು | : | ಜಿ.ಆರ್. ತಿಪ್ಪೇಸ್ವಾಮಿ<br>ಮುದ್ದಪ್ಪ ಸ್ಮಾರಕ ಟ್ರಸ್ಟ್,<br>ಬೆಂಗಳೂರು – ೨೦೦೬ |
| ೫. | ಕೇರಿಗೆ ಬಂದ ಹೋರಿ | : | ಕೃಷ್ಣಮೂರ್ತಿ ಹನೂರು<br>ಪುರೋಗಾಮಿ ಸಾಹಿತ್ಯ ಸಂಘ,<br>ಬೆಂಗಳೂರು – ೧೯೯೦ |
| ೬. | ಕಳೆದ ಮಂಗಳವಾರ ಮುಸ್ಸಂಜೆ | : | ಕೃಷ್ಣಮೂರ್ತಿ ಹನೂರು<br>ರೂಪ ಪ್ರಕಾಶನ, ಮೈಸೂರು – ೨೦೦೮ |
| ೭. | ಕನ್ನಡ ಕಥನ ಸಾಹಿತ್ಯ : ಕಾದಂಬರಿ | : | ಜಿ.ಎಸ್. ಅಮೂರ<br>ಸ್ವಪ್ನ ಬುಕ್ ಹೌಸ, ಬೆಂಗಳೂರು. ೨೦೦೬ |
| ೮. | ಭಾರತೀಯ ಸಾಹಿತ್ಯ ಸಮೀಕ್ಷೆ | : | ಎಲ್.ಎಸ್. ಶೇಷಗಿರಿರಾವ್<br>ಕರ್ನಾಟಕ ಸಾಹಿತ್ಯ ಅಕಾಡೆಮಿ. |
| ೯. | ಬಾರೊ ಗೀಜಗನೆ | : | ಕೃಷ್ಣಮೂರ್ತಿ ಹನೂರು<br>ಪುರೋಗಾಮಿ ಸಾಹಿತ್ಯ ಸಂಘ<br>ಬೆಂಗಳೂರು. ೧೯೮೫ |
| ೧೦. | ನಿಕ್ಷೇಪ | : | ಕೃಷ್ಣಮೂರ್ತಿ ಹನೂರು<br>ಸಂವಹನ ಪ್ರಕಾಶನ, ಮೈಸೂರು. ೧೯೯೮ |
| ೧೧. | ಕತ್ತಲಲ್ಲಿ ಕಂಡ ಮುಖ | : | ಕೃಷ್ಣಮೂರ್ತಿ ಹನೂರು<br>ಸಂವಹನ ಪ್ರಕಾಶನ,<br>ಮೈಸೂರು – ೨೦೦೨ |

| | | | |
|---|---|---|---|
| ೧೨. | ಸಾಹಿತ್ಯ ವಿಸ್ತಾರ | : | ಕರೀಗೌಡ ಬೀಚನಹಳ್ಳಿ<br>ಅಜಂತ ಪ್ರಕಾಶನ,<br>ಬೆಂಗಳೂರು - ೨೦೦೨ |
| ೧೩. | ಕನ್ನಡ ಜಾನಪದ ಪ್ರಜ್ಞೆ | : | ವೀರಣ್ಣದಂಡೆ<br>ಕವಿಮಾರ್ಗ ಪ್ರಕಾಶನ,<br>ಕಲಬುರ್ಗಿ - ೧೯೯೨ |
| ೧೪. | ಪ್ರಬುದ್ಧ ಕರ್ನಾಟಕ | : | ಚಿನ್ನದ ಸಂಚಿಕೆ<br>ಪ್ರಸಾರಾಂಗ,<br>ಮೈಸೂರು ವಿಶ್ವವಿದ್ಯಾನಿಲಯ -<br>೧೯೬೯ |
| ೧೫. | ವಿಮರ್ಶೆಯ ದಾರಿಯಲ್ಲಿ | : | ಸುಮತೀದ್ರ ನಾಡಿಗ<br>ಕರ್ನಾಟಕ ಬುಕ್ ಏಜೆನ್ಸಿ<br>ಬೆಂಗಳೂರು. |

## ಪತ್ರಿಕಾ ಲೇಖನಗಳು

| | | | |
|---|---|---|---|
| ೧. | ಕಳೆದ ಮಂಗಳವಾರ ಮುಸ್ಸಂಜೆ ವಿಮರ್ಶೆ | : | ಜಿ.ಆರ್. ತಿಪ್ಪೇಸ್ವಾಮಿ<br>ಅಗ್ನಿ : ಜೂನ್-೧೨, ೨೦೦೮ |
| ೨. | ಕಳೆದ ಮಂಗಳವಾರ ಮುಸ್ಸಂಜೆ ವಿಮರ್ಶೆ | : | ಸಿ.ಎನ್. ರಾಮಚಂದ್ರನ್<br>ಪ್ರಜಾವಾಣಿ, ಭಾನುವಾರ,<br>ಜೂನ್-೮, ೨೦೦೮ |
| ೩. | ಹನೂರರ ಸಂದರ್ಶನ | : | ಸುರೇಶ ದೊಡ್ಡಪಾಳ್ಯ<br>ಪ್ರಜಾವಾಣಿ, ಶನಿವಾರ,<br>ಏಪ್ರಿಲ್-೩, ೨೦೧೦ |
| ೪. | ವಿಮರ್ಶೆ | : | ಎ.ಆರ್. ಮದನ್‌ಕುಮಾರ್<br>ಆಂದೋಲನ, ಸೋಮವಾರ<br>ಸೆಪ್ಟೆಂಬರ್-೧೭, ೨೦೦೭ |

